

ಸ್ಮರಣೆ ಒಂದೇ ಸಾಲದೇ ಗೋವಿಂದನ
ನಾಮ ಒಂದೇ ಸಾಲದೇ ॥ ಪ ॥

ಪರಮ ಪುರುಷನನ್ನು ನೆರೆ ನಂಬಿದವರಿಗೆ
ದುರಿತಬಾಧೆಗಳು ಗುರುತು ತೋರುವುವೇ ॥ ಅ.ಪ. ॥

ಕಡುಮೂರ್ಖನಾದರೇನು ದುಷ್ಕರ್ಮದಿಂ
ತೊಡೆದಾತನಾದರೇನು
ಜಡನಾದರೇನವನಾವ ಜಾತಿಯಾದರೇನು
ಬಿಡದೆ ಪ್ರಹ್ಲಾದನ್ನ ಸಲಹಿದ ಹರಿಯ ॥ 1 ॥

ಪಾತಕಿಯಾದರೇನು ಸರ್ವಪ್ರಾಣಿ
ಘಾತಕಿಯಾದರೇನು
ನೀತಿಯ ಬಿಟ್ಟು ದುಷ್ಕರ್ಮಿಯಾದರೇನು
ಪ್ರೀತಿಯಿಂದಜಾಮಿಳನ ಸಲಹಿದ ಹರಿಯ ॥ 2 ॥

ಸಕಲತೀರ್ಥ ಯಾತ್ರೆಯ ಮಾಡಿದಂಥ
ನಿಖಿಲ ಪುಣ್ಯದ ಫಲವು
ಭಕುತಿಯೊಡನೆ ಬಿಡದನುದಿನದಲ್ಲಿ
ಪ್ರಕಟ ಪುರಂದರ ವಿಠಲನ ನಾಮದ ॥ 3 ॥

—ಶ್ರೀ ಪುರಂದರದಾಸರು.

# ಮುಖಚಿತ್ರ

ಮನೋಜವಂ ಮಾರುತ ತುಲ್ಯವೇಗಂ ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಂ ।
ವಾತಾತ್ಮಜಂ ವಾನರಯೂಥ ಮುಖ್ಯಂ ಶ್ರೀರಾಮದೂತಂ ಶಿರಸಾ ನಮಾಮಿ ॥

ಅಂಜನಾ ಸುತನಾಗಿ ಸುಗ್ರೀವ ಮಂತ್ರಿಯಾಗಿ ರಾಮದೂತನಾಗಿ ಹೆಸರು ಹೊಂದಿದ ಆಂಜನೇಯ ಪ್ರಾತಃಸ್ಮರಣೀಯ ಪುರಾಣ ವ್ಯಕ್ತಿಗಳಲ್ಲಿ ಒಬ್ಬ, ಶ್ರೇಷ್ಠವ್ಯಾಕರಣ ಪಂಡಿತನೂ, ವೇದವಿದನೂ, ಅತಿಬಲಶಾಲಿಯೂ, ಅತಿಸೂಕ್ಷ್ಮಮತಿಯೂ ನಿಷ್ಠಾವಂತ ಬ್ರಹ್ಮಚಾರಿಯೂ ಆದ ಈ ಕಪಿಶ್ರೇಷ್ಠ ತನ್ನೆಲ್ಲ ಶಕ್ತಿ ಪ್ರತಿಭೆಗಳನ್ನೂ ತಾನು ಹಿರಿದೆಂದುಕೊಂಡ ತತ್ತ್ವಕ್ಕೆ–ರಾಮತತ್ತ್ವಕ್ಕೆ ಸಮರ್ಪಿಸಿಕೊಂಡು ಚಿರಂಜೀವಿಯಾದ. ರಾಮಕಥೆ–ಕೀರ್ತನೆ ನಡೆವಲ್ಲೆಲ್ಲ ಉಪಸ್ಥಿತನಾಗಿರುವ ಅವನು ಭಕ್ತಾಗ್ರೇಸರ. ಆದರೂ ವಾನರ ಸೇನಾ ಸಿಂಧುವಿನಲ್ಲಿ, ರಾಮ ಭಕ್ತ ಸಿಂಧುವಿನಲ್ಲಿ ತಾನೊಂದು ಬಿಂದು ಮಾತ್ರ ಎಂಬ ವಿನಯವನ್ನು ಮೆರೆದವನು. ಅವನ ಪೂಜೆ, ಆದರ್ಶ ಸ್ಮರಣೆಗೆ ಹನುಮಜ್ಜಯಂತಿ ಒಂದು ನೆಪಮಾತ್ರ.

ಆಂಜನೇಯನಲ್ಲಿ ಎಲ್ಲ ಶ್ರೇಷ್ಠ ಗುಣಗಳೂ ಮನೆ ಮಾಡಿವೆ. ಎಂತಲೇ ಅವನು ಬಹುಮುಖಿ ಪಂಚಮುಖದ ಆಂಜನೇಯ ಭಾರತೀಯ ಶಿಲ್ಪದಲ್ಲಿ ಅಪರೂಪವೇನಲ್ಲ. ಮಂತ್ರಾಲಯದ ಬಳಿಯ ಗಾಣದಾಳದ ಪಂಚಮುಖಿ ಆಂಜನೇಯನನ್ನು ಕನ್ನಡ ಹರಿದಾಸರು ಸ್ತುತಿಸಿದ್ದೂ ಇದೆ. ಪಂಚಮುಖಗಳು ಪಂಚಭೂತಗಳಿಗೂ ಜ್ಞಾನಪಂಚೇಂದ್ರಿಯಗಳಿಗೂ ಸಂಕೇತವಾಗಿರುವುದೂ ಉಂಟು.

" ವಂದೇ ವಾನರ ನಾರಸಿಂಹ ಖಗರಾಟ್ ಕ್ರೋಡಾಶ್ವ ವಕ್ತ್ರಾಂಚಿತಂ "

# ಮುಖ್ಯಗಮನಿಕೆ

* ತಿ. ತಿ. ದೇ. ಧಾರ್ಮಿಕ ಪುಸ್ತಕಗಳಿಗಾಗಿ
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಪಲಕಗಳು, ಕ್ಯಾಲೆಂಡರುಗಳು ಹುಂಡಿಯ ಡಬ್ಬಿಗಳಿಗಾಗಿ
* ವಾರ್ಷಿಕ ಶುಭಾಕಾಂಕ್ಷೆಯ ಪತ್ರಗಳು, ಪಂಚಾಂಗಗಳಿಗಾಗಿ
* ತಿ ತಿ. ದೇವಸ್ಥಾನಗಳ ಭಕ್ತಿಗೀತೆಗಳ ಕ್ಯಾಸೆಟ್‌ಗಳಿಗಾಗಿ

ಡಿ. ಡಿ, ಎಂ. ಓ, ಹಣವನ್ನು ಕಳುಹಿಸುತ್ತ, ಕೂಡಲೇ ಬರೆಯಿರಿ.

ಡೆಪ್ಯೂಟಿ ಎಕ್ಸಿಕ್ಯೂಟಿವ್ ಆಫೀಸರ್ (ಎಸ್)
ತಿ.ತಿ. ದೇವಸ್ಥಾನಗಳು, ತಿರುಪತಿ - ೫೧೭೫೦೧.




ಗೌರವ ಸಂಪಾದಕರು :

ಶ್ರೀ ಸಿ.ಎಚ್. ವೆಂಕಟಪತಿರಾಜು ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಟಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್ ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥


ಸಂಪುಟ ೧೭] ಮೇ ೧೯೮೭ [ಸಂಚಿಕೆ ೧೨


# ವಿಷಯಸೂಚಿ



ಮುಖಚಿತ್ರ : ಪಂಚಮುಖಿ ಆಂಜನೇಯ—ಚಿತ್ರ—ಶಶಿ
ಹಿಂಬದಿಯಲ್ಲಿ : ಶ್ರೀಗೋವಿಂದರಾಜಸ್ವಾಮಿ ಕಾಲೇಜಿನ ನೂತನ ಕಟ್ಟಡ.
ಒಳಗಡೆ : ಎಸ್. ಜಿ. ಎಸ್. ಕಾಲೇಜಿನ ನೂತನ ಭವನ ಉದ್ಘಾಟನೆಯಲ್ಲಿ ಹಾಗೂ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಭಾರತದ ರಾಷ್ಟ್ರಪತಿ ಶ್ರೀ ಜ್ಞಾನಿ ಜೇಲ್‌ಸಿಂಗ್.



# ಸಂಪಾದಕೀಯ



**ಶ್ರೀ ಎಸ್. ಲಕ್ಷ್ಮೀನಾರಾಯಣ,**
ಐ.ಎ.ಎಸ್.

**ಶ್ರೀ ಸಿ. ಎಚ್. ವೆಂಕಟಪತಿರಾಜು,**
ಐ.ಎ.ಎಸ್.

ತಿ.ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿಯಾಗಿ ಶ್ರೀ ಸಿ. ಎಚ್. ವೆಂಕಟಪತಿರಾಜು ಐ ಎ.ಎಸ್. ಅವರು ಪದವಿಯನ್ನು ಸ್ವೀಕರಿಸಿದ್ದಾರೆ. ಈ ಮೊದಲು ಶ್ರೀ ಎಸ್. ಲಕ್ಷ್ಮೀನಾರಾಯಣ, ಐ ಎ.ಎಸ್. ಅವರು ಕಾರ್ಯನಿರ್ವಹಣಾಧಿಕಾರಿಗಳಾಗಿ ಸುಮಾರು ಎರಡೂವರೆ ವರ್ಷಕಾಲ ಶ್ರೀ ವೆಂಕಟೇಶ್ವರಸ್ವಾಮಿಯ ಹಾಗೂ ಯಾತ್ರಿಕರ ಸೇವೆ ಸಲ್ಲಿಸಿ ಹೊಸಬರಿಗೆ ಎಡೆನೀಡಿದ್ದಾರೆ.

ಶ್ರೀ ಎಸ್. ಲಕ್ಷ್ಮೀನಾರಾಯಣ ಅವರ ಕಾಲದಲ್ಲಿ ನಡೆದ ಯಾತ್ರಿಕೋಪಯೋಗಿ ಕೆಲಸಗಳು ಕಡಮೆಯೇನಲ್ಲ. ವೈಕುಂಠದ ಕ್ಯೂಕಾಂಪ್ಲೆಕ್ಸ್ ಕೆಲಸವನ್ನು ಶೀಘ್ರಗೊಳಿಸಿದ್ದೇ ಅಲ್ಲದೆ ಬಹು ಮುಖ್ಯವಾಗಿ ತಿರುಮಲೆಯ ಯಾತ್ರಿಕರಿಗೆ ಉಚಿತ ಭೋಜನದ ಶ್ರೀ ವೆಂಕಟೇಶ್ವರ ಅನ್ನದಾನ ಯೋಜನೆಯನ್ನು ಜಾರಿಗೆ ತಂದದ್ದು, ವೈಕುಂಠ ತೋರಣ, ಹೊಸ ಕಲ್ಯಾಣ ಕಟ್ಟೆ, ತಿರುಚಾನೂರಿನ ಕಲ್ಯಾಣ ಮಂಟಪಗಳು, ತಿರುಮಲೆಗೆ ತಿರುಪತಿಯಿಂದ ಬಳಸುರಸ್ತೆ, ಇತ್ಯಾದಿಗಳ ನಿರ್ಮಾಣದಲ್ಲಿಯೂ ಅತ್ಯುತ್ಸಾಹದಿಂದ ಅತಿ ಶೀಘ್ರಗತಿಯಲ್ಲಿ ಕಾರ್ಯ ನಡೆಯುವಂತೆ ನೋಡಿಕೊಂಡದ್ದು, ಸ್ವಾಮಿಗೆ ವಜ್ರಕಿರೀಟ ಸಮರ್ಪಣೆ, ಯಾತ್ರಿಕರಿಗೆ ಉಚಿತ ಮುಡಿ ನೀಡುವ ಅವಕಾಶ ಕಲ್ಪಿಸಿದ್ದು, ಅವರ ಭಕ್ತಿಗೆ, ಯಾತ್ರಿಕ ಭಕ್ತಿಗೆ ಹಿಡಿದ ಸೊಡರುಗಳಾದರೆ, ಶ್ರೀ ಗೋವಿಂದರಾಜಸ್ವಾಮಿ ಕಾಲೇಜು ನೂತನ ಕಟ್ಟಡ, ಅಂಗವಿಕಲರ ಸೇವೆಯಲ್ಲಿ ಬಾಲಾಜಿ ಸೇವಾ ಸಮುದಾಯ ಆಸ್ಪತ್ರೆಗಳು ಸಾಮಾಜಿಕ ಹಿತ ಸಾಧನೆಯಲ್ಲಿನ ಅವರ ತೀವ್ರ ಕಳಕಳಿಯನ್ನು ಎತ್ತಿಹಿಡಿಯುತ್ತವೆ. ತಿರುಮಲೆಯ ಯಾತ್ರಿಕರಿಗಾಗಿ ಹೆಚ್ಚಿನ ವಸತಿ ಸೌಕರ್ಯ ನೀಡುವಲ್ಲಿ ಇರುವ ಕಾಟೇಜುಗಳ ಮೇಲಂತಸ್ತುಗಳ ನಿರ್ಮಾಣ, ಹೊಸ ಹೊಸ ವಸತಿ ಗೃಹಗಳ ನಿರ್ಮಾಣ, ಸಪ್ತಗಿರಿ ಸತ್ರಗಳು, ಆಂಧ್ರದ ಹಾಗೂ ಇತರೆಡೆಗಳ ಬೇರೆ ಬೇರೆ ನಗರಗಳಲ್ಲಿ ತಿ. ತಿ. ದೇವಸ್ಥಾನಗಳ ಕಲ್ಯಾಣ ಮಂಟಪಗಳ ನಿರ್ಮಾಣ ಕಾರ್ಯ ಇನ್ನೂ ನಡೆದಿವೆ. ಪರಿಸರವನ್ನು ಪರಿಶುದ್ಧಗೊಳಿಸಿಟ್ಟುಕೊಳ್ಳುವ ಕಾಳಜಿಯಲ್ಲಿ ಅವರ ದಿವ್ಯಾರಾಮ ಯೋಜನೆ, ತಿರುಮಲೆಯ ತರುರಕ್ಷಣಾಕ್ರಮಗಳು ಶ್ಲಾಘ್ಯವೆಂದು ಯಾರಾದರೂ ಹೇಳಿಯಾರು.

ಹೊಸ ಕಾರ್ಯನಿರ್ವಹಣಾಧಿಕಾರಿ ಶ್ರೀ ವೆಂಕಟಪತಿರಾಜು ಈ ಮೊದಲು ಚಿತ್ತೂರು ಜಿಲ್ಲಾಧಿಕಾರಿಗಳಾಗಿ ಹಿತಮಿತ ಮೃದು ಮಧುರಭಾಷಿಯೆಂದು ಹೆಸರುಗಳಿಸಿದವರು. ಆಡಳಿತ ಸಮರ್ಥರೆಂದೂ, ಜನಾನುರಾಗಿಗಳೆಂದೂ, ಸಾರ್ವಜನಿಕ ಹಿತಪರರೆಂದೂ ಹೆಸರಾದವರು. ಯಾತ್ರಿಕರ ಸೌಕರ್ಯಗಳೇ ತಮ್ಮ ಪ್ರಥಮ ಕರ್ತವ್ಯವೆಂದು ಭಾವಿಸಿ ಕೆಲಸ ಮಾಡುವುದಾಗಿ ನುಡಿದಿದ್ದಾರೆ. ಇಂತಹ ಹಿರಿಯರನ್ನು ಸಪ್ತಗಿರಿ ಗೌರವ ಸಂಪಾದಕ ಸ್ಥಾನಕ್ಕೆ ಆಹ್ವಾನಿಸುತ್ತ, ತಿ ತಿ. ದೇವಸ್ಥಾನಗಳ ಹೊಸ ಕಾರ್ಯನಿರ್ವಹಣಾಧಿಕಾರಿ ಸ್ಥಾನಕ್ಕೆ ಆಹ್ವಾನಿಸುತ್ತ, ಅವರ ಆಡಳಿತ ಅನುಭವ ಪ್ರತಿಭೆಗಳಿಂದ ಸ್ವಾಮಿ ಸೇವೆಯಲ್ಲಿ ಹಾಗೂ ಯಾತ್ರಿಕ ಸೇವೆಯಲ್ಲಿ ಇನ್ನೂ ಹೆಚ್ಚಿನ ಗುಣಮಟ್ಟ ಮುಟ್ಟಲು ಎಲ್ಲ ಉದ್ಯೋಗಿಗಳಿಗೂ ಸ್ಫೂರ್ತಿ, ನಿರ್ದೇಶನಗಳು ದೊರೆಯುವಂತೆ ಆಗಲಿ ಎಂದು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಪ್ರಾರ್ಥಿಸುವ.

# ಶ್ರೀ ರಾಮಾನುಜಾಚಾರ್ಯರ ತಿರುನಕ್ಷತ್ರ

ಅಖಿಲ ಭುವನ ಜನ್ಮ ಸ್ಥೇಮ
ಭಂಗಾದಿಲೀಲೇ
ವಿನತ ವಿವಿಧ ಭೂತವ್ರಾತ
ರಕ್ಷೈಕದೀಕ್ಷೇ
ಶ್ರುತಿಶಿರಸಿ ವಿದೀಪ್ತೇ
ಬ್ರಹ್ಮಣಿ ಶ್ರೀನಿವಾಸೇ
ಭವತು ಮಮ ಪರಸ್ಮಿನ್
ಶೇಮುಷೀ ಭಕ್ತಿರೂಪಾ

ರಾಮಾನುಜಾಚಾರ್ಯರ ತಿರುನಕ್ಷತ್ರ ೦ದರೆ ಹುಟ್ಟಿದ ಹಬ್ಬ. ಚಾಂದ್ರಮಾನ ೀತಿಯಲ್ಲಿ, ಹುಟ್ಟಿದ ದಿನವನ್ನು ಗೊತ್ತು ಾಡುತ್ತಾರೆ. ಸೌರಮಾನ ರೀತಿ, ಹುಟ್ಟಿದ ೦ಗಳು ನಕ್ಷತ್ರವನ್ನು ಹಿಡಿಯುತ್ತದೆ. ಮಿಳು ದೇಶದಲ್ಲಿ ಸೌರಮಾನ ವಾಡಿಕೆಯ ್ದಿದೆ. ರಾಮಾನುಜಾಚಾರ್ಯರು ತಮಿಳ ಾಡ್ಡರಿಂದ ಅವರ ಜನ್ಮ ದಿನವನ್ನು ಅವರ ಕ್ಷತ್ರದ ದಿನ ಆಚರಿಸುವುದು ವಾಡಿಕೆಯಾ ದೆ. ತಿರು ಎಂದರೆ ಶ್ರೀ–ಶುಭವನ್ನು ಸೂಚಿ ಸಲು ಸೇರಿಸಿರುವ ಈ ತುಣುಕಿನಿಂದ ಈ ದಿನ ಆಚಾರ್ಯರ ಹುಟ್ಟಿದ ಹಬ್ಬ ಅಥವಾ ಜನ್ಮದಿನೋತ್ಸವ ಎಂಬ ಅರ್ಥ ಬರುತ್ತದೆ. ಜೀವಂತರಾಗಿರುವವರ ವಿಷಯದಲ್ಲಿ ಇಂಥ ದಿನವನ್ನು ವರ್ಧಂತಿ ಎನ್ನುವುದೂ ತೀರಿ ಕೊಂಡ ಹಿರಿಯರ ವಿಷಯದಲ್ಲಿ ಜಯಂತಿ ಎನ್ನುವುದೂ ಹಿಂದಿನಿಂದ ಬಂದಿರುವ ಒಂದು ಕ್ರಮ.

ಸಂಪ್ರದಾಯ ಹೇಳುವಂತೆ ರಾಮಾನು ಜರು ಶಾಲಿವಾಹನ ಶಕ 940 ರ ಲೆಕ್ಕದ ಪಿಂಗಳ ಸಂವತ್ಸರ ಚೈತ್ರ ಶುದ್ಧ ಪಂಚಮಿ ಗುರುವಾರ ಜನಿಸಿದರು. ಅವರು ಹುಟ್ಟಿದ ನಕ್ಷತ್ರ ಆರಿದ್ರಾ. ಇವರು ಹುಟ್ಟಿದ್ದು ಪೆರಂ ಬುದೂರಿನಲ್ಲಿ. ಇವರ ತಂದೆ ಆಸೂರಿ ಕೇಶವ ಸೋಮಯಾಜಿ, ತಾಯಿ ಕಾಂತಿಮತಿ. ಕೇಶವ ಸೋಮಯಾಜಿ ಹಾರೀತ ಗೋತ್ರ ಯಜುಶ್ಯಾಖೆ ಆಪಸ್ತಂಬ ಸೂತ್ರದ ಒಬ್ಬ ಪ್ರಮುಖರು. ಸಂಪ್ರದಾಯದ ಹಿರಿಯರಲ್ಲಿ ಒಬ್ಬ ಪ್ರಮುಖರೆನ್ನಿಸಿಕೊಂಡಿದ್ದ ಶ್ರೀಶೈಲ ಪೂರ್ಣರು ಕಾಂತಿಮತಿದೇವಿಯವರ ಅಣ್ಣ.

ಆರಂಭದಲ್ಲಿ ಊರಲ್ಲೇ ವಿದ್ಯೆ ಕಲಿತು ಪೂರ್ವ ತಾರುಣ್ಯದಲ್ಲಿ ಮದುವೆಯಾಗಿ ಆಚಾ ರ್ಯರು ವಿದ್ಯೆಯನ್ನು ಮುಂದುವರಿಸಲು ಕಾಂಚೀಪುರಕ್ಕೆ ಬಂದರು. ಅಲ್ಲಿ ವರದರಾಜ ದೇವಾಲಯದಲ್ಲಿ ಅಭಿಷೇಕಕ್ಕೆ ನೀರು ತರುವ ಕೈಂಕರ್ಯವನ್ನು ಅಂಗೀಕರಿಸಿ ಯಾದವ ಪ್ರಕಾಶ ಎಂಬ ಪಂಡಿತರಲ್ಲಿ ತತ್ತ್ವವನ್ನು ಕಲಿಯ ತೊಡಗಿದರು.

ಯಾದವ ಪ್ರಕಾಶರು ಅದ್ವೈತಿ, ಆಚಾ ರ್ಯರು ಆ ಸಿದ್ಧಾಂತದ ನಿರ್ಗುಣ ಬ್ರಹ್ಮ ವನ್ನು ಒಪ್ಪುವ ಸಂಪ್ರದಾಯದವರಲ್ಲ. ಇವರ ವಿದ್ಯೆ ಆ ಗುರುವಿನಲ್ಲಿ ಮುಂದುವರಿ ಯಲಿಲ್ಲ. ಇವರು ಜೀವ ಬ್ರಹ್ಮ ಎನ್ನುವ ವಾದವನ್ನು ಒಪ್ಪುವವರಲ್ಲ. ಬ್ರಹ್ಮ ಎಲ್ಲ ಚೇತನಾಚೇತನದ ಅಂತರ್ಯಾಮಿ ಪರ ತತ್ತ್ವ ಎನ್ನುವುದು ಇವರ ನಂಬಿಕೆ. ಈ ನಂಬಿಕೆಗೆ ಆಗ್ಗೆ ವಿಶಿಷ್ಟಾದ್ವೈತ ಎಂದು ಹೆಸರು.

ಬಹು ಬೇಗನೆ ಆಚಾರ್ಯರು ಸಮಸ್ತ ಕಲ್ಯಾಣ ಗುಣ ಪೂರ್ಣವಾದ ವಿಷ್ಣು ತತ್ತ್ವದ ಆರಾಧಕರ ಸಮುದಾಯದಲ್ಲಿ ಸಮರ್ಥ ರಾದ ಪಂಡಿತರು ಎಂದು ಹೆಸರು ಪಡೆದರು. ಸ್ವಲ್ಪ ಕಾಲ ಸಂಸಾರ ನಡೆದ ನಂತರ ಪತ್ನಿ ತಮ್ಮ ಧ್ಯೇಯಗಳಿಗೆ ಸರಿಯಾಗಿ ನಡೆಯ ಲಾರರು ಎಂದುಕೊಂಡು ಆಚಾರ್ಯರು ಅವರನ್ನು ಅಕೆಯ ತಂದೆಯ ಮನೆಗೆ ಕಳು ಹಿಸಿದರು; ಸಂನ್ಯಾಸ ತೆಗೆದುಕೊಂಡರು.

ಈ ಸಂಪ್ರದಾಯದ ಜನರಿಗೆ ಆಗ ಶ್ರೀರಂಗ ಕೇಂದ್ರ, ಅಲ್ಲಿ ಯಾಮುನಾಚಾ ರ್ಯರು ಪ್ರಮುಖರು. ಯಮುನಾಚಾ ರ್ಯರು ತುಂಬ ವೃದ್ಧರಾಗಿದ್ದರು. ತಮ್ಮ ನಂತರ ಸಂಪ್ರದಾಯರ ಸಮುದಾಯಕ್ಕೆ ಯಾರನ್ನು ಪ್ರಮುಖರನ್ನಾಗಿ ನೇಮಿಸು ವುದು ಎಂದು ಯೋಚಿಸುತ್ತಿದ್ದರು. ಆಚಾ ರ್ಯರ ಸದಾಚಾರ ಪಾಂಡಿತ್ಯಗಳ ವಿಷಯ ಕಿವಿಗೆ ಬಿದ್ದು ಆ ಹಿರಿಯರು ಕಾಂಚೀಪುರಕ್ಕೆ ಬಂದು ಇವರನ್ನು ದೂರದಿಂದ ನೋಡಿ ಈತ ತಮ್ಮ ಉತ್ತರಾಧಿಕಾರಿಯಾಗಲು ತಕ್ಕವರು ಎಂದು ಕಂಡುಕೊಂಡರು. ಆಮೇಲೆ ಸ್ವಲ್ಪ ಕಾಲದಲ್ಲಿ ತಾವು ತೀರಿ ಕೊಳ್ಳುವ ವೇಳೆ ಇವರಿಗೆ ಹೇಳಿ ಕಳುಹಿಸಿ ದರು. ಇವರು ಶ್ರೀರಂಗಕ್ಕೆ ಸೇರುವ ಮುನ್ನ ಅವರು ಸಮಾಧಿಸ್ಥರಾಗಲು ಅವರ ಅನು ಯಾಯಿಗಳು ಆಚಾರ್ಯರಿಗೆ ಹಿರಿಯರ ಅಪೇಕ್ಷೆಯನ್ನು ತಿಳಿಸಿದರು.

ಆಚಾರ್ಯರು ಕಾಂಚೀಪುರಕ್ಕೆ ಹಿಂತಿ ರುಗಿ ಕೆಲವು ಕಾಲದ ನಂತರ ಶ್ರೀರಂಗಕ್ಕೆ ಮರಳಿ ಬಂದರು. ಅಲ್ಲಿ ಸಂಪ್ರದಾಯದ ಹಿರಿಯರಾಗಿ ನಿಂತರು. ಈ ಸ್ಥಾನಕ್ಕೆ ಅವ ಶ್ಯಕವಾದ ಎಲ್ಲ ಅಧಿಕಾರವನ್ನು ಪಡೆಯಲು ಒಬ್ಬ ಗುರುವಿನಲ್ಲಿ ತತ್ತ್ವದ ಉಪದೇಶ, ಒಬ್ಬರಲ್ಲಿ ದೀಕ್ಷೆ, ಒಬ್ಬರಲ್ಲಿ ಅಷ್ಟಾಕ್ಷರಿ ಉಪದೇಶವನ್ನು ಪಡೆದರು; ಒಬ್ಬರಲ್ಲಿ ಆಳ್ವಾರುಗಳ ಪ್ರಬಂಧಪಾಠವನ್ನು ಮಾಡಿ ದರು. ಮಾವ ಶೈಲಪೂರ್ಣರಲ್ಲಿ ರಾಮಾಯ ಣವನ್ನು ಅನುಸಂಧಾನ ಮಾಡಿದರು. ಆಮೇಲೆ ಹಲವು ವರ್ಷ ಭರತ ಭೂಮಿಯ ಯಾತ್ರೆ ನಡೆಸಿ ಕಾಶ್ಮೀರದಲ್ಲಿದ್ದ ಬ್ರಹ್ಮ ಸೂತ್ರ ವ್ಯಾಖ್ಯಾನ ಒಂದರ ಅಭ್ಯಾಸ ಮುಗಿಸಿ ಬಂದರು. ಅನಂತರ ಗುರು ಯಾಮುನರ ಅಪೇಕ್ಷೆಯಂತೆ ವಿಶಿಷ್ಟಾದ್ವೈ ತವನ್ನು ಸಿದ್ಧಾಂತಮಾಡಿ ಬ್ರಹ್ಮ ಸೂತ್ರ ಗಳ ಭಾಷ್ಯವನ್ನು ರಚಿಸಿದರು.

ಆಚಾರ್ಯರ ಅಪರ ವಯಸ್ಸಿನಲ್ಲಿ ಚೋಳದೇಶವನ್ನು ಆಳಿದ ರಾಜನು ಶೈವಾ ಭಿಮಾನದ ಅತಿರೇಕದಲ್ಲಿ ಇವರಿಗೆ ಕೇಡು

ದಿ|| ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್

# ರಾಮಾನುಜರ ದಿವ್ಯಾಜ್ಞೆ

ಸುರಭಿರಾಗ ಝಂಪೆ ತಾಳ

ಎನ್ನ ಕೊನೆ ಸಂದೇಶ ಕೇಳಿರಿ ಶಿಷ್ಯರೆ
ಚೆನ್ನು ಭಗವಂತನ ಆರಾಧಿಸಿರಿ ಭಕುತರೇ || ಪ ||

ದೇವರನು ನಂಬಿ ದೇವರ ಮಹಿಮೆ ನಂಬಿ
ಆಚಾರ್ಯರ ನಂಬಿ ಭಾಗವತರನು ನಂಬಿ || ಅ. ಪ ||

ಜೀವಜಗ ದೇವರಾ ಮಹಾಸೃಷ್ಟಿ ಕಾಣಿರಿ
ಸೇವೆಪೂಜೆ ಧ್ಯಾನದಲಿ ಸುಜ್ಞಾನ ಪಡೆಯಿರಿ 1

ಇಂದ್ರಿಯಂಗಳ ದಾಸರಾಗುವುದ ತಡೆಯಿರಿ
ಸ್ವಾರ್ಥ ಸಂಪಾದನೆಯ ಸಾಧನೆ ಹಾದಿ ಬಿಡಿರಿ 2

ಪರಮಾತ್ಮ ಚಿಂತನದಿ ನಿತ್ಯ ಕಾಲಕಳೆಯಿರಿ
ಗುರುವ ಗುಣಕೆ ಬೆಲೆ ಕೊಡಿ ಜಾತಿಯ ಕೇಳದಿರಿ 3

ನಿಮ್ಮ ಸ್ಥಿತಿ ಗತಿಕರ್ಮಾನುಸಾರ ನಡೆವುದು
ನಿಜ ಶರಣನಿಗೆ ನಾಳಿನ ಚಿಂತೆಯೇ ಸಲ್ಲದು 4

ಶ್ರೀಭಾಷ್ಯವನು ಚೆನ್ನಾಗಿ ಅಭ್ಯಾಸಮಾಡಿರಿ
ಶ್ರೀವೈಷ್ಣವರಿಗದ ಚೆನ್ನ ಉಪದೇಶಿಸಿರಿ 5

ಆಗದಿರೆ ಅದು ದಿವ್ಯ ಪ್ರಬಂಧ ಪಠಿಸಿರಿ
ಆಳ್ವಾರುಗಳ ದಿವ್ಯದನುಭಾವ ಪಡೆಯಿರಿ 6

ಅದೂ ಆಗದಿರೆ ದಿವ್ಯ ಕ್ಷೇತ್ರ ಸಂದರ್ಶಿಸಿ
ಶ್ರೀರಂಗ, ತಿರುಪತಿ, ಮೇಲುಕೋಟೆಯು ನೋಡಿರಿ 7

ಅದೂ ಆಗದಿರೆ ನೀವಿದ್ದಲ್ಲೇ ಇದ್ದು ಧ್ಯಾನಮಾಡಿರಿ
ದಾಸಾನು ದಾಸರಾಗಿರಿ 8

ಆಸ್ತಿಕರ ಸಂಗ ನಿಮ್ಮಾಣೆ ಬಿಡ ಬೇಡಿರಿ
ನಾಸ್ತಿಕರ ಸಂಗ ನಿಮ್ಮಾಣೆ ಮಾಡ ಬೇಡಿರಿ 9

ತಿಳಿವಿಗೆ ಜಾತಿ ಇಲ್ಲ ಒಲವಿಗೆ ಮೈಲಿಗೆ ಇಲ್ಲ
ಜೀವ ಜೀವರುಗಳಿಗೆ ಯಾವ ಭೇದವೂ ಇಲ್ಲಾ 10

(ಶ್ರೀಭಾಷ್ಯಕಾರರ ದಿವ್ಯಾಜ್ಞೆ ಅನುವಾದ)

—ಗಮಕಿ ಶ್ರೀ ಬಿ.ಎಸ್. ರಾಮಾಚಾರ್

ಮಾಡುವಂತೆ ಕಂಡಾಗ ಆಚಾರ್ಯ
ಶಿಷ್ಯರು ತಮ್ಮ ಈ ಹಿರಿಯರನ್ನು ಚೋ
ದೇಶದಿಂದ ಹೊರಕ್ಕೆ ಒಯ್ದರು. ಆಚಾ
ರ್ಯರು ಆಗ ಸುಮಾರು ಇಪ್ಪತ್ತು ವರ್ಷ
ಹೊಯಿಸಳ ನಾಡಿನಲ್ಲಿ ಸಾಲಿಗ್ರಾಮ
ತೊಂಡನೂರು, ಮೇಲುಕೋಟೆಯಲ್ಲಿ ಬಾ
ನಡೆಸಿದರು. ಆ ಕಾಲದಲ್ಲಿ ಹೊಯಿಸಳ ರಾ
ಬಿಟ್ಟಿದೇವನು ಇವರ ಶಿಷ್ಯನಾದನು; ವಿಷ್ಣು
ವರ್ಧನ ಎಂದು ಹೆಸರು ತಳೆದನು; ಬೇಲೂ
ರಿನ ಚೆನ್ನಕೇಶವ ದೇವ ಮಂದಿರವನ್ನು
ನಿರ್ಮಿಸಿದನು.

ಅದೇ ಕಾಲದಲ್ಲಿ ಆಚಾರ್ಯರು ಮೇ
ಕೋಟೆಯಲ್ಲಿ ದೇವಾಲಯದ ನಿರ್ಮಾಣ
ಕಾರಣರಾದರು. ಅದರ ಉತ್ಸವಮೂರ್ತಿ
ಯನ್ನು ಪಡೆಯುವುದಕ್ಕೆ ಸಹಾಯ ಮಾ
ದರೆಂಬ ಕಾರಣದಿಂದ ಆ ದೇವಾಲಯ
ವರ್ಷದಲ್ಲಿ ಮೂರು ದಿನ ಹರಿಜನ
ಪ್ರವೇಶವಿರಲಿ ಎಂದು ವ್ಯವಸ್ಥೆ ಮಾಡಿದರು
ಅಷ್ಟರಲ್ಲಿ ವೈಷ್ಣವ ದ್ವೇಷಿ ಚೋಳ ರಾಜ
ತೀರಿಕೊಂಡು ಇವರು ಶ್ರೀರಂಗಕ್ಕೆ ಹಿಂತಿ
ಗಿದರೆ ಅಪಾಯ ಇಲ್ಲ ಎಂದು ತಿಳಿಯಲಾ
ಆಚಾರ್ಯರು ಅಲ್ಲಿಗೆ ಹೋದರು. ಅಲ್ಲಿ ಇನ
ಇಪ್ಪತ್ತು ಮೂವತ್ತು ವರ್ಷ ಉಪದೇ
ಮಾಡುತ್ತಿದ್ದು ಕ್ರಿ. ಶ. ೧೧೩೭ ರಲ್ಲಿ ಸಮಾ
ಧಿಯನ್ನೈದಿದರು.

ವೇದಾಂತದ ಮೂರು ಮತಗಳ
ಒಂದಾದ ವಿಶಿಷ್ಟಾದ್ವೈತವನ್ನು ಸಿದ್ಧಾಂ
ಮಾಡಿದ್ದು ರಾಮಾನುಜಾಚಾರ್ಯರ ಮು
ಕಾರ್ಯ. ಇದನ್ನು ಇವರು ಮಾಡಿದ್ದು
ಭಾಷ್ಯದಲ್ಲಿ. ಇದೇ ಕಾರ್ಯವನ್ನು ಇವ
ತಮ್ಮ ಇತರ ಗ್ರಂಥಗಳಿಂದ ಪೂರ್ಣಮಾ
ದರು. ಆ ಗ್ರಂಥಗಳು, ವೇದಾಂತ ದೀ
ವೇದಾಂತಸಾರ ಎಂಬ ಶ್ರೀಭಾಷ್ಯದ ಎರ
ಸಂಗ್ರಹ ರೂಪಗಳು, ವೇದಾರ್ಥ ಸಂಗ್ರ
ಮತ್ತು ಶ್ರೀಭಗವದ್ಗೀತಾಭಾಷ್ಯ. ಇದ
ಆಚಾರ್ಯರು ಸಾಧಿಸಿದ ಇತರ ಕಾಯ

1. ಶ್ರೀ ವೈಷ್ಣವ ಸಮುದಾಯವ
ಸಂಘಟಿಸಿ ಅದಕ್ಕೆ ಶ್ರೀರಂಗವನ್ನು ಕೇಂ
ಮಾಡಿದ್ದು;

(36 ನೇ ಪುಟ ನೋ

ಸಪ

# ಶಬ್ದಶಿಲ್ಪಿ ರುದ್ರಭಟ್ಟ

ಹತ್ತನೆಯ ಶತಮಾನದಲ್ಲಿ ಪಂಪ, ರನ್ನ, ಪೊನ್ನರಿಂದ ಸುವರ್ಣಯುಗದ ಘನತೆಗೇರಿದ ಚಂಪೂಕಾವ್ಯ ಹನ್ನೆರಡನೇ ಶತಮಾನದಲ್ಲಿ ವೀರಶೈವಧರ್ಮಕ್ರಾಂತಿ, ವಚನಸಾಹಿತ್ಯಕ್ರಾಂತಿ, ರಾಜ್ಯಕ್ರಾಂತಿಗಳಿಂದ ತತ್ತರಿಸಿದಾಗ, ಅದಕ್ಕೊಂದು ಹೊಸಚೇತನವನ್ನಿತ್ತು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮತ್ತೊಮ್ಮೆ ಮಹಾಪೂರದಂತೆ ಹರಿಸಿದ ಶ್ರೇಯಸ್ಸು ಕವಿ ರುದ್ರಭಟ್ಟನಿಗೆ ಸಲ್ಲುತ್ತದೆ.

ರುದ್ರಭಟ್ಟನು ಹರಿ-ಹರರಲ್ಲಿ ಅಭೇದ ದೃಷ್ಟಿಯನ್ನುಳ್ಳ ವಿಶಾಲ ಮನೋಭಾವದ ಭಾಗವತ ಸಂಪ್ರದಾಯದ ಬ್ರಾಹ್ಮಣ ಕವಿ. ಈ ಮೊದಲೇ ಚಂದ್ರಭಟ್ಟ, ಶ್ರೀಕಂಠಸೂರಿ, ಮಧುಸೂದನ ದೇವ, ಪಂಚತಂತ್ರ ಬರೆದ ದುರ್ಗಸಿಂಹ, ಚಂದ್ರ ಚೂಡಾಮಣಿ ಶತಕ ಬರೆದ ನಾಗವರ್ಮಾಚಾರ್ಯ, ಲೋಕೋಪಕಾರವನ್ನು ರಚಿಸಿದ ಚಾವುಂಡರಾಯ ಮುಂತಾದ ಬ್ರಾಹ್ಮಣಕವಿಗಳು ಆಗಿ ಹೋಗಿದ್ದರೂ, ಇವರ ಕೃತಿಗಳಾವುವೂ ರುದ್ರಭಟ್ಟನ 'ಜಗನ್ನಾಥವಿಜಯ'ದ ನೆರೆಗೆ ನಿಲ್ಲಲಾರವು.

ರುದ್ರಭಟ್ಟನು ತನ್ನ ಕಾಲವನ್ನು ಕುರಿತು ಯಾವ ಸೂಚನೆಯನ್ನು ತನ್ನ ಕೃತಿಯಲ್ಲಿ ತಿಳಿಸಿಲ್ಲ. ಆದರೆ ಕವಿಚರಿತೆಕಾರರಾದ ಶ್ರೀ ಆರ್. ನರಸಿಂಹಾಚಾರ್ಯ ಅವರು ಈ ಕವಿಯು ಕ್ರಿ.ಶ. 1185 ರಲ್ಲಿ ಜೀವಿಸಿದ್ದನೆಂಬುದನ್ನು ಪ್ರಬಲಕಾರಣಗಳಿಂದ ಸಮರ್ಥಿಸಿದ್ದಾರೆ.

ಕಾಲಕ್ಕೆ ತಕ್ಕಂತೆ ಕವಿಗಳ ಉದ್ಭವವಾಗುತ್ತದೆ. ಎಂಬುದೊಂದು ಲೋಕೋಕ್ತಿ. ಕವಿರುದ್ರಭಟ್ಟ ಹೊಯ್ಸಳರ ರಾಜ ಮನೆತನದಲ್ಲಿದ್ದವನು. ಆಕಾಲದಲ್ಲಿ ಕನ್ನಡನಾಡು-ಸುಖ-ಸಮೃದ್ಧಿಯ ಬೀಡಾಗಿತ್ತು. ಇಂಥ ಕಾಲದಲ್ಲಿ ಸಹಜವಾಗಿಯೇ ಸಾಹಿತ್ಯ ಶಿಲ್ಪ ಸಂಗೀತ, ಚಿತ್ರ, ನಾಟ್ಯ ಮುಂತಾದ ಲಲಿತಕಲೆಗಳಿಗೆ ಪ್ರೋತ್ಸಾಹ ಗೌರವಗಳಿದ್ದವು. ಈ ಸಮಯ ಪರಿಸರಗಳಲ್ಲಿ ರುದ್ರಭಟ್ಟನಂಥ ಉನ್ನತ ಮಟ್ಟದ ಕವಿಗಳ-ಕೃತಿಗಳ ಸೃಷ್ಟಿಯಾಗಿದ್ದು ಸಹಜವಾಗಿದೆ.

ರುದ್ರಭಟ್ಟನ ಕೃತಿ 'ಜಗನ್ನಾಥ ವಿಜಯ'. ಕವಿಯು ತನ್ನ ಕೃತಿಗೆ ಈ ಹೆಸರನ್ನು ಇಡುವಲ್ಲಿ ಪಂಪ, ರನ್ನರ ವಿಕ್ರಮಾರ್ಜುನ ವಿಜಯ, ಸಾಹಸಭೀಮ ವಿಜಯ-ಈ ಕೃತಿ-ಹೆಸರುಗಳಿಂದ ಪ್ರಭಾವಿತನಾಗಿರಬಹುದು. ಆದರೆ ಅಭಿಮಾನಕ್ಕೆ ಕಟ್ಟುಬಿದ್ದು ತನ್ನ ಒಡೆಯನನ್ನು ಕಥಾನಾಯಕನಿಗೆ ಹೋಲಿಸಿ ಕಾವ್ಯದ ತುಂಬ ಹೊಗಳಲಿಲ್ಲ ಒಡೆಯನ ಹೊಗಳಿಕೆ. ಸ್ತುತಿ ಪ್ರಶಸ್ತಿಗಳೆಲ್ಲ ಕಾವ್ಯ ಪ್ರಾರಂಭದ ಕೆಲವೇ ಪದ್ಯಗಳಿಗೆ ಸೀಮಿತವಾಗಿದ್ದು, ಕವಿಯ ಔಚಿತ್ಯ ಪ್ರಜ್ಞೆಯ ಕುರುಹಾಗಿದೆ.

ಕವಿಯು ತನ್ನ ಕೃತಿ – 'ಜಗನ್ನಾಥ ವಿಜಯ'ದ ಅಂತರ್ಯವನ್ನು ಕುರಿತು "ಕಥೆ ವಿಷ್ಣುಪುರಾಣಂ, ಸತ್ಕೃತಿ-ವೇಳ್ಗುಂ ಸುಕವಿರುದ್ರಂ, ಈ ಕೃತಿಗೆ ಕಥಾಪತಿ-ಕೃಷ್ಣಂ, ಶ್ರುತಿಯುಂ ಭೂನುತವೆ ಜಗನ್ನಾಥನೆನೆ ಮೆಚ್ಚದರಾರ್?" ಎಂದು ಪ್ರಶ್ನಿಸಿ, ಇದು "ಅನವದ್ಯಂ, ರೀತಿ ಚೋದ್ಯಂ, ಸಕಲ ವಿಬುಧ ಹೃದ್ಯಂ" ಎಂದು ವರ್ಣಿಸಿದ್ದಾನೆ. ಕೊನೆಯಲ್ಲಿ ಯಾವನನ್ನು ಕುರಿತು ಈ ಕೃತಿಯು ರಚಿತಗೊಂಡಿದೆಯೋ ಅವನು ಅದನ್ನು ಸ್ವೀಕರಿಸುತ್ತಾನೆಂಬ ಭರವಸೆಯನ್ನು ವ್ಯಕ್ತಪಡಿಸಿ ಸಾರ್ಥಕತೆಯ ಭಾವ ತಳೆದಿದ್ದಾನೆ.

ಕವಿಯು ತಾನೆ ತಿಳಿಸಿರುವಂತೆ ವಿಷ್ಣುಪುರಾಣದ 5ನೇ ಅಂಕವನ್ನಾಧರಿಸಿ ತನ್ನ ಕಾವ್ಯವನ್ನು ರಚಿಸಿದ್ದರೂ, ಭಾರತ, ಭಾಗವತ, ಹರಿವಂಶ, ಶ್ರೀಕೃಷ್ಣ ಕರ್ಣಾಮೃತ ಮುಂತಾದ ಅನೇಕ ಸಂಸ್ಕೃತ ಗ್ರಂಥಗಳ ಸಹಾಯವನ್ನು ಪಡೆದಿದ್ದಾನೆ. ವಿಷ್ಣುಪುರಾಣದ ಕೃಷ್ಣಾವತಾರದ ಕಥೆ ಮೈತ್ರೇಯಿ ಕೇಳಿದ ಪ್ರಶ್ನೆಗಳಿಗೆ ಪರಾಶರರುತ್ತರಿಸುತ್ತಾ ಕೃಷ್ಣನ ಏಕೋತ್ತರ ಶತಕೃತ್ಯಗಳನ್ನು ತಿಳಿಸುವಲ್ಲಿ ವರ್ಣನೆಗೊಂಡಿದೆ. ಈ ಪುರಾಣದಲ್ಲಿ ಚಿತ್ರರಗೊಂಡ ರೇಖಾಚಿತ್ರವನ್ನು ಕವಿರುದ್ರಭಟ್ಟ ತನ್ನ ಸ್ವಂತ ಕಲ್ಪನೆಯ ಕುಂಚದಿಂದ ಕಾವ್ಯ ಕಲಾತ್ಮಕತೆಯ ಕುಸುರಿ ಕೆಲಸಮಾಡಿ ನವರಸಗಳಿಂದ ನವುರುಗೊಳಿಸಿ ಮನಮೋಹಕಗೊಳಿಸಿದ್ದಾನೆ.

'ಜಗನ್ನಾಥ ವಿಜಯ'ದ ಪ್ರಮುಖ ಅಂಶಗಳನ್ನು ಎತ್ತಿಕೊಂಡು ವಿವರಿಸಬಹುದಾಗಿದೆ. ಆ ದೃಷ್ಟಿಯಿಂದ ಅದನ್ನು ಬಾಲಲೀಲಾವಿನೋದ, ರಾಸಕ್ರೀಡೆ, ಪಾರಿಜಾತಾಪಹರಣ, ಶ್ರೀಕೃಷ್ಣ ಭಕ್ತಿ, ವೀರರಸ ಸೃಷ್ಟಿ ಎಂದು ಮುಂತಾಗಿ ವಿಭಾಗಿಸಿ ಅವಲೋಕಿಸಬಹುದು.

ಕೃಷ್ಣನ ಬಾಲಲೀಲಾ ವಿನೋದಗಳು ಅನಂತ ಅಪಾರ. ಕೃಷ್ಣ ಹಸುಳೆಯಾಗಿದ್ದಾಗ ಮಾನವ ಸಹಜವಾದ ಮುಗ್ಧ ಸ್ನಿಗ್ಧತೆಯ ಮನೋಹರ ಆವರಣದ ಮರೆಯಲ್ಲಿ ತೋರಿದ ಭಯಾನಕ ಕೃತ್ಯಗಳು ಓದುಗರನ್ನು ರೋಮಾಂಚನ ಗೊಳಿಸುತ್ತವೆ.

**ಶ್ರೀ ಗುರುನಾಥ ಇನಾಮದಾರ**

ಅದೇ ತಾನೇ ಜನಿಸಿದ ಶಿಶುಕೃಷ್ಣನನ್ನು ಹೊತ್ತು ವಸುದೇವ ಗೋಕುಲಕ್ಕೆ ಹೊರಟಿದ್ದಾನೆ. ಮಧ್ಯರಾತ್ರಿಯ ಸಮಯ ಭೋರೆಂಬ ಮಳೆ-ಗಾಳಿ. ಅದನ್ನು ಲೆಕ್ಕಿಸದೆ ಹೊರಟ ವಸುದೇವ ಸ್ವಲ್ಪದೂರ ಬಂದು ಹಿಂದಿರುಗಿ ನೋಡಿದಾಗ "ಸಾವಿರಾರು ಜನ ಕಂಸನ ಗುಪ್ತಚಾರರು ಕೈಯಲ್ಲಿ ದೀವಿಟಿಗೆ ಹಿಡಿದು ಬರುತ್ತಿದ್ದಾರೆ". ಎಂದು ಭಯಗೊಂಡ. ಆದರೆ ಆ ದೀವಿಟಿಗೆಗಳು ಸಮೀಪ ಬಂದಾಗ ಕಂಡದ್ದೇನು? ಅವು ಕಂಸನ ಗುಪ್ತಚಾರರ ದೀವಿಟಿಗೆಗಳಲ್ಲ! ಸಹಸ್ರ ಫಣಾಮಣಿಗಳುಳ್ಳ ಆದಿಶೇಷ! ತನ್ನ ಒಡೆಯ ಅನಂತನಿಗೆ ಚತ್ರಹಿಡಿಯಲು ಧಾವಿಸಿ ಬರುತ್ತಿದ್ದಾನಂತೆ!

ಬಾಲಕೃಷ್ಣ ಪೂತನಿಯ ನಂಜಿನ ಮೊಲೆಯುಂಡು ಆಕೆಯ ಪ್ರಾಣವನ್ನೇ ಹೀರಿದಾಗ "ಅಟ್ಟಾಸುರವಾಗಿ ಬಿಟ್ಟು ಕೆಡುವಂತೆ ಭೂತಲದೊಳ್ ಕೆಡೆದ ಪೂತನಿಯ ಮೇಲೆ ಮೊಲೆಯುಂ ಕೆಡೆವಾಯೊಳಿಟ್ಟು ಪಟ್ಟಿರ್ದ ಶಿಶುವಂ ಯಶೋದೆ ಬಂದು ಕಂಡಳ್" ಎಂದು ಹೇಳುವಲ್ಲಿ ಕವಿಯು ಕಟ್ಟಾಸುರದ ವಿಕ್ಷತವನ್ನು, ಮುಗ್ಧಮೋಹಕ ಮೂರ್ತಿಯನ್ನು ಒಂದೆಡೆ ತಂದು ಕಡೆದಿಟ್ಟು ಒಂದು ಶಬ್ದ ಪವಾಡವನ್ನೇ ಎಸಗಿದ್ದಾನೆ.

ಅದೇ ರೀತಿ ತುಂಟನಾದ ಕೃಷ್ಣನನ್ನು ಒರಳಿನ ಕಲ್ಲಿಗೆ ಕಟ್ಟಿದಳು ಯಶೋದೆ. ಆ ಕಲ್ಲನ್ನೆ ಎಳೆಯುತ್ತ ಹೊರಬಂದ ಮಗು "ಮಹಾಯಮಳಾರ್ಜುನ ಕುಜದಲ್ಲಿ ಸಿಕ್ಕಿದ ಒರಲಂ ತೆಗೆಯಕ್ಕೆ ಅನುಗೆಯೊಡ್ಡೆ, ಆ ಯಮಳಾರ್ಜುನರು ಕಿಳ್ತು ಬೇರ್ವೆರಸು ಬಿಳ್ದರೆ, ಮಧ್ಯದೊಳಿರ್ದನಚ್ಯುತಂ।" ತಾಯಿ ಮತ್ತು ಇತರ ಗೋಪಿಯರ ಎದುರೇ ಈ ಅಮಾನುಷ ಕೃತ್ಯ ನಡೆದಿದ್ದರೂ ಅವರು ಭಯಪಡದೆ "ಮುದ್ದಿದು ಎಂಬ ಅದಟಿದು ಎಂಬಂತಾಯ್ತು ಯುಕ್ತ ಜಗತ್ರಯ ರಕ್ಷಾಪ್ರಿಯ ನಪ್ಪ ಕೃಷ್ಣನ ಚರಿತ್ರಂ।" ಎಂದು ಕವಿ ಉದ್ಗರಿಸಿದ್ದಾನೆ.

ಮಗು ಕೃಷ್ಣನನ್ನು ಯಶೋದೆ ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ನಿದ್ದೆಬರಿಸಲು ರಾಮಾಯಣದ ಕಥೆ ಹೇಳುತ್ತಿದ್ದಾಳೆ. ಮಗು 'ಹುಂ' ಗುಟ್ಟುತ್ತಲಿದೆ ಕಥೆ ಹೇಳುತ್ತ ಹೇಳುತ್ತ ಮಧ್ಯ ರಾವಣ ಸೀತೆಯನ್ನು ಕದ್ದೊಯ್ದ ಎಂದು ಹೇಳಿದಾಗ ಮಗು ತನ್ನ ಪೂರ್ವಾವತಾರದ ಸ್ಮರಣೆ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00* | ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ಪರ್ಚನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಯಿಂದ, ಕಡೆಗೆ ಹೊಂಗುಡದೆ, ಅತ್ಯಾಗ್ರ ಕೋ
ದಿಂದ ಹೂಂಕಾರವಮಾಡಿ ಅವುಡುಗಚ್ಚಿ ಕಿಡಿ
ಬಿಡುವ ಬಾಲಕೃಷ್ಣನನ್ನು ಕಂಡು ಯಶೋ
ನಿಬ್ಬೆರಗಾಗುತ್ತಾಳೆ. ಈ ಕಲ್ಪನಾಚಿತ್ರ ಕ
ಚಾತುರ್ಯದಿಂದ ಅತ್ಯದ್ಭುತವಾಗಿ ಚಿತ್ರಿತವಾ

ಇದೇ ರೀತಿ ಬಾಲಕ ಕೃಷ್ಣ ಗೋಪಿಯರ ಪರಿಗೆ ಕೈತಟ್ಟಿ ಕುಣಿದಾಡುವ ನೃತ್ಯಭಂಗಿಗಳ ಕಣ್ಣಿಗೆ ಕಟ್ಟುವಂತೆ ಕವಿಯು ಮಧುರವ ತಾಳ ಲಯಬದ್ಧವಾದ, ಮಲ್ಲಿಕಾಮಾಲೆಯಲ್ಲಿ ಐದು ಪದ್ಯಗಳಲ್ಲಿ ವರ್ಣಿಸಿರುವ ಬಗೆ ಅಪೂ ವಾದುದು, ಕನ್ನಡಸಾಹಿತ್ಯದಲ್ಲಿ ಅದ್ವಿತೀಯವಾ ದಾಗಿದೆ. ಆ ಪದ್ಯಗಳಲ್ಲೊಂದಿದು.

ನೀರಜೋತ್ಪಲ ವರ್ಣನಾಡಿದ
ನಾಡಿದಂ ಕಮಲೇಕ್ಷಣಂ
ಚಾರುಹಾಸ ವಿವಾಸ ನಾಡಿದ
ನಾಡಿದಂ ಸುಭಗಂ ಶುಭಾ
ಕಾರನಾಡಿದನೆಂದು ಗೋಪಿಯ
ರಾಡಿಸುತ್ತಮಿರಲ್ಕೆ ಸಂ
ಸಾರನಾಟಕ ಸೂತ್ರಧಾರಿ
ಮುರಾರಿ ಕೈಪರೆಗಾಡಿದಂ

ಶ್ರೀ ಕೃಷ್ಣನು ಗೋಪಿಕಾಸ್ತ್ರೀಯರೊಂ ನಡೆಸಿದ ರಾಸಕ್ರೀಡೆಯನ್ನು ತುಂಬ ಚೆಲು ವರ್ಣಿಸಿದ್ದಾನೆ. ವಿಷ್ಣು ಪುರಾಣದಲ್ಲಿ ಶೀಘ್ರ ಯಲ್ಲಿ ಸಾಗುವ ಈ ವರ್ಣನೆ ಜಗನ್ನಾಥ ವಿ ದಲ್ಲಿ ವಿಶಾಲವಾಗಿ ಸಮುದ್ರದಂತೆ ಮೊರೆ ಬೆಳದಿಂಗಳರಾತ್ರಿಯಲ್ಲಿ ಕುಮುದ, ಕುಮ ಕುಸುಮಗಳು ಅರಳಿ ದಿಗ್ದಿಗಂತಗಳಿಗೆಲ್ಲ ಪರಿ ಹರಡಿದಾಗ, ಲಲಿತವೇಷ ಭೂಷಣಗಳ ಭೂಷಿತನಾಗಿ ಕೊಳಲೂದುತ್ತ ರಾಸಕ್ರೀ ಕೃಷ್ಣ ವೃಂದಾವನ ಪ್ರವೇಶಿಸುತ್ತಾನೆ. ಆತನ ಕೊಳಲ ಸನ್ನೆಯ ಕೇಳಿ ಗೋಪಿ ಸ್ತ್ರೀಯರು ಬಂದರು. ಎಂತೆಂಥ ಗೋಪಿಕೆಯ ಹೇಗೆ ಹೇಗೆ ನಡೆದು ಬಂದರೆಂಬುದನ್ನು ಕವಿ ವರ್ಣಿಸಿರುವದನ್ನು ಓದಿದರೆ ಕವಿಯ ಸ್ತ್ರೀ ಶ ಜ್ಞಾನದ ಸೂಕ್ಷ್ಮತೆಯರಿವಾಗುತ್ತದೆ. ಗೋ ಯರು ಅವನನ್ನು ಸುತ್ತುವರಿದು ನಿಂತಾಗ ಗೋ ಚಂದ್ರ ಪರಿವೇಷಗೊಂಡ ಚಂದ್ರನಂತೆಯೇ ಕ "ನಗೆ ಮೊಗದಿಂ ಮುಗುಳ್ನಗೆ ತುಳಂಕೆ, ಬಲ ಯಿಂದೆ ಅಧರಲ್ಗಳ್ ಅಲುಗೆ, ನಿಡು ಗಣ್ ಪೊಳಪು ಸಾಲಿಡೆ, ನೀಳಚಳಾವಳಕಾಳ ಮ್ಮಗ ಮಧುಲೀಣಿ ಸೂಸೆ, ಲತೆ ತೆಂಬೆಲ ಒಯ್ಯನೆ ನರ್ತಿಪಂದದಿಂ ಸೊಗಯಿಸೆ, ಗೋ ಪಕ್ಕೆಯ ಲಯಕ್ಕೆ ಪೆರಳ್ ಜತಿ–ಮೆಟ್ಟುತೆ ದಳ್" ಎಂದು ಗೋಪಿಕಾ ಸ್ತ್ರೀಯರು ನರ್ತಿ

(33ನೇ ಪುಟ ನೋ

# ಬೇಲೂರು ಹಳೇಬೀಡು

ಬೇಲೂರು–ಹಳೇಬೀಡು ಜಗತ್ಪ್ರಸಿದ್ಧವಾದದ್ದೇ ಹೊಯ್ಸಳರಿಂದ. ಇಲ್ಲಿಯ ಹೊಚ್ಚ ಹೊಸ ಕಲೆಯ ಸೌಂದರ್ಯವನ್ನು ಕಂಡು ಹಾಡಿ ಹೊಗಳಿದವರು ಅಪೆಷ್ಟೋಮಂದಿ. ಕವಿಗಳು, ವಿಮರ್ಶಕರು, ಸಂಶೋಧಕರು, ರಸಿಕರು, ಸಹೃದಯರೆಲ್ಲಾ ಈ ಸೌಂದರ್ಯಕ್ಕೆ ತಲೆಬಾಗಿದವರೇ, ಶರಣಾದವರೇ. ಇದಕ್ಕೆಲ್ಲಾ ಅದರ ಕಲಾಭವ್ಯತೆ ಕಾರಣ. ಈ ಕಲಾಸಂಪನ್ನತೆ ನಮಗೆ ಬೋಧಿಸುವ ತತ್ತ್ವವೆಂದರೆ "ರಸೋ ವೈ ಸಃ".

ವೇಲಾಪುರಿ ಎಂದು ಇತಿಹಾಸ ಪ್ರಸಿದ್ಧವಾದ ಬೇಲೂರಿನ ಆಕರ್ಷಣೆ ಎಂದರೆ ಶ್ರೀ ಚೆನ್ನಕೇಶವ, ಕಪ್ಪೆಚೆನ್ನಿಗ, ಶ್ರೀ ಲಕ್ಷ್ಮೀನಾರಾಯಣ ಮತ್ತು ಅಮ್ಮನವರ ಗುಡಿಗಳು. ಇವೆಲ್ಲವೂ ನಮ್ಮ ಪುರಾಣ, ಆಗಮೋಕ್ತವಾದ, ಭಾರತ ಸಂಸ್ಕೃತಿಯ ಪ್ರತೀಕ. ವಿಷ್ಣುವರ್ಧನನ ತಂದೆ ವಿನಯಾದಿತ್ಯನ ಕಾಲದಲ್ಲಿ ಬೇಲೂರು ವೇಲಾಪುರಿ ಎಂದು ಪ್ರಸಿದ್ಧವೆನಿಸಿ ಹೊಯ್ಸಳರ ರಾಜಧಾನಿ ಎನಿಸಿತ್ತು. ಆ ಕಾಲದಲ್ಲಿ ಹೊಯ್ಸಳರು ಚಾಳುಕ್ಯರ ಸಾಮಂತರಾಗಿದ್ದವರು. ಇಲ್ಲಿಯ ಪ್ರಮುಖ ದೈವ ಚೆನ್ನಕೇಶವ ಅಥವಾ ವಿಜಯನಾರಾಯಣ ವಿಷ್ಣುವರ್ಧನ ರಾಜನಿಂದ ಕ್ರಿ. ಶ. 1117 ನೆಯ ಹೇವಿಳಂಬಿ ಸಂವತ್ಸರದಲ್ಲಿ ಪ್ರತಿಷ್ಠಾಪಿತವಾದುದು. ಎರಡೂವರೆ ಅಡಿಯ ಗರುಡನ ಮೇಲೆ ಈ ಮೂರ್ತಿಯನ್ನು ಕೆತ್ತಲಾಗಿದೆ. ಉಭಯ ಪಾರ್ಶ್ವಗಳಲ್ಲಿ ಶ್ರೀದೇವಿ – ಭೂದೇವಿಯರು ಚಾಮರಧಾರಣಿಯರನ್ನು ಕೆತ್ತಿದೆ. ದೇವರ ಪ್ರಭಾವಳಿ ನಾನಾ ದೈವಗಳ ಸಂಗಮದಂತಿದ್ದು ವರುಣದಂಪತಿಗಳು, ದಶಾವತಾರದ ಚಿತ್ರಗಳು, ಕೇಶವ–ದಾಮೋದರರು, ಪತ್ನಿ ಸಮೇತರಾದ ಅಷ್ಟ ದಿಕ್ಪಾಲರರು ಮೂರ್ತೀಭವಿಸಿದ್ದಾರೆ. ದೇವರ ಪೀಠದಲ್ಲಿ–

**ಜಿಷ್ಣು ರ್ವಿಷ್ಣು ರ್ಮಹೀಪಾಲ**
**ಪಾಲಿತಾಖಿಲ ಭೂತಲಃ**
**ದೇವ ದೇವೇಶ ವಿಜಯ**
**ನಾರಾಯಣಮಚೀಕರತ್**

ಎಂಬ ಶ್ಲೋಕವನ್ನು ಕಂಡರಸಿದೆ. ಮತ್ತೊಂದು ಪ್ರಸಿದ್ಧ ಗುಡಿ ಕಪ್ಪೆಚೆನ್ನಿಗರಾಯ. ಇದಕ್ಕೆ ಪೂಜೆ ನಡೆಯದೇ ಮತ್ತೆ ಈಚೆಗೆ ಕೆಲವು ದಿನಗಳಲ್ಲಿ ಪೂಜೆ ಸಲ್ಲುತ್ತಿದೆ. ಈ ದೈವದ ಬಗೆಗಿನ ಡಂಕಣ–ಜಕ್ಕಣರ ಐತಿಹ್ಯದ ಕಥೆ ಎಲ್ಲರಿಗೂ ತಿಳಿದದ್ದೇ. ಆದರೆ ಈ ಹೆಸರಿನ ಶಿಲ್ಪಿಗಳ ಹೆಸರು ಬೇಲೂರಿನ ಯಾವ ಶಾಸನದಲ್ಲೂ ಕಂಡುಬಂದಿಲ್ಲ. ರಾಜನಾದ ವಿಷ್ಣುವರ್ಧನ ತನ್ನ ಪಟ್ಟ ಮಹಾದೇವಿ, ನಾಟ್ಯರಾಣಿಯ ಅಪೇಕ್ಷೆಯಂತೆ, ಈ ಗುಡಿ ನಿರ್ಮಿಸಿದ. ಇದು ಅತ್ಯಂತ ಸುಂದರ ಮೂರ್ತಿಯಾಗಿದ್ದು ನಖ–ಶಿಖಾಂತ ನಾನಾ ಆಭರಣಗಳಿಂದ ಸಮನ್ವಿತವಾಗಿದೆ. ಇದರ ಪೀಠದ ಮೇಲೆ

ಶಾಂತಿಕ್ಕೃತ್ಸರ್ವ ಭೂತಾನಾಂ
ಪ್ರತಿಷ್ಠಾ ವಿಷ್ಣು ಕಾಂತಯಾ
ಚೆನ್ನಕೇಶವ ದೇವಸ್ಯ
ಶಾಂತಿ ದೇವ್ಯಾ ಕೃತೋತ್ತಮಾ

ಎಂಬ ಶ್ಲೋಕವಿದ್ದು ಪಟ್ಟಮಹಾದೇವಿ ಎಂದು ಬರೆಯಲಾಗಿದೆ. ಈ ಗುಡಿಯಲ್ಲಿ ಎರಡು ಗರ್ಭಗೃಹಗಳಿದ್ದು, ದೊಡ್ಡಗುಡಿಯಾದ ವಿಜಯನಾರಾಯಣ ಗುಡಿಯಂತೆಯೇ ಮೂರು ಒಳಕೋಣೆಗಳಿಂದ ಕೂಡಿದೆ. ಶ್ರೀ ಚೆನ್ನಕೇಶವ ಏಳು ಅಡಿ ಎತ್ತರವಾಗಿ ಭವ್ಯವೆನಿಸಿ ತನ್ಮಯಗೊಳಿಸುತ್ತದೆ. ಹೊಯ್ಸಳರಿಂದ ನಿರ್ಮಿತವಾದರೂ ಇದನ್ನು ಉಳಿಸಿ, ಬೆಳೆಸಿಕೊಂಡು ಬಂದವರು ವಿಜಯನಗರದ ಅರಸರು, ಪಾಳೆಗಾರ ನಾಯಕರು ಹಾಗೂ ಮೈಸೂರು ಒಡೆಯರುಗಳು. ಕಲ್ಬುರ್ಗಿಯ ಗಂಗಾಸಾಲಾರ್; ಹಂಶುದ್ದೀನ್ ಷಾ ಮುಂತಾದ ವರ ಧಾಳಿಯಿಂದ ನಾಶವಾದ ಗೋಪುರವನ್ನು ಕೃಷ್ಣದೇವರಾಯನ ಮುತ್ತಜ್ಜ ಹರಿಹರನ ದಂಡಾಧಿಪತಿ ಸಾಳ್ವಗುಂಡ



ಎಂಬುವನು 13ನೇ ಶತಮಾನದಲ್ಲಿ ದುರಸ್ತಿಗೊಳಿಸಿದ. ವಿಜಯನಗರದ ಅರಸರ ಕಾಣಿಕೆ ಎಂದರೆ ಪ್ರಸಿದ್ಧವಾದ ವಿಜಯನಗರ ಮಂಟಪ, ಅಮ್ಮನವರ ದೇವಸ್ಥಾನ, ಶ್ರೀರಾಮದೇವಸ್ಥಾನ

**ಶ್ರೀ ದೇವನೂರು ಪಾಂಡುರಂಗ**

ಶ್ರುತಗಾನಮಭಿರಾಮಮಾದೊಡ ಶ್ರುತಗಾನ
ಮಭಿರಾಮತರಮೆನುತೆ ರಸಿಕರೊಸೆವರ್ ।
ರಾಮಣೀಯಕ ಕುಲಮೇ ನಿಮ್ಮೆದೆಯ. ನುಡಿ ಕಿವಿಯ
ನಾನದೊಡಮೆಮ್ಮೆದೆಯ ಸೇರಲರಿಗುಂ ।
ಆದರಿಂದಮಲ್ತೆ ನಿಮ್ಮಭಿಮತಂಗಳನರಿತು
ಜಾಣರೆನಿಬರೊ ನಿಮ್ಮ ಪೊಗಳಿ ನಲಿವರ್ ।
ವರ್ಷ ಶತಕಗಳಿಂದೆ ಕುಂದದಿಹ ಲಾವಣ್ಯ
ದಂತರಂಗವಹಿಂತು ಬಗೆವೆನೀಗಳ್ ॥
ಬಿದಿಯ ಕರ ಚಾತುರಿಯೊಳನಿತನಿತು ಸುಳಿದು ಸರಿವ ।
ಮನುಜ ಮಾನಸದೊಳತಿ ಚಿತ್ರದಿಂ ಜಲಿಸಿ ಮೆರೆವ ।
ಭುವನ ಜೀವನ ಸಸ್ಯಕಮೃತ ಬಿಂದುಗಳನೆರೆವ ।
ಪರತತ್ತ್ವ ಮಾಧುರಿಯನಿನಿಸು ನೀಂ ತೋರ್ಪಿರಲ್ತೆ ॥

[ಡಿ.ವಿ.ಜಿ. ಅವರ ನಿವೇದನದಿಂದ]

ಹಾಗೂ ದೊಡ್ಡ ರಥ, ಪ್ರಮುಖವಾದವು: ದೇವಾಲಯಕ್ಕೆ ಬಿಟ್ಟ ಉಂಬಳಿ, ದಾನವಮಾಡಿದ ಚಿನ್ನ ಇದೆಲ್ಲ ಶಾಸನಗಳಲ್ಲಿ ವೇದ್ಯವಾಗಿದೆ. ಪಾಕಶಾಲೆ, ಮುಮ್ಮೆಟ್ಟಿನ್ನೆಡು ಅಡಿಯ ದೀಪಸ್ತಂಭ ಪಣತೆಗಳೆಲ್ಲ ವಿಜಯನಗರದ ಅರಸರಕಾಲದ್ದು.

ಮೈಸೂರು ಒಡೆಯರೂ ಈ ದೇವಾಲಯಕ್ಕೆ ಭಕ್ತಿಯಿಂದ ಸಾಕಷ್ಟು ದಾನ ನೀಡಿದ್ದಾರೆ. ನಾಲ್ಮಡಿ ಕೃಷ್ಣರಾಜ ಒಡೆಯರು ದೇವಾಲಯಕ್ಕೆ ನಾನಾ ಆಭರಣಗಳನ್ನು ನೀಡಿ, ದೇವಾಕಾರ್ಯಗಳೆಲ್ಲಾ ಜರುಗಿಸುವ ಹೊಣೆಹೊತ್ತಿದ್ದರು. ಶ್ರೀ ಜಯಚಾಮರಾಜ ಒಡೆಯರು ಹೊಯ್ಸಳರ ಇತಿಹಾಸವನ್ನೇ ಕಲ್ಲಿನಲ್ಲಿ ಬರೆಸಿದರು. ಹೊಯ್ಸಳ ವಿಷ್ಣುವರ್ಧನ ಹಾಗೂ ನಾಲ್ಮಡಿ ಕೃಷ್ಣರಾಜ ಒಡೆಯರ ಕಂಚಿನ ವಿಗ್ರಹಗಳನ್ನು ನಿರ್ಮಿಸಿದರು. ಸುಮಾರು 103 ವರ್ಷಗಳ ಕಾಲ ದೇವಾಲಯದ ಎಲ್ಲ ಕಾರ್ಯಕಲಾಪಗಳನ್ನು ಮೈಸೂರು ಅರಸರು ವಿಜೃಂಭಣೆಯಿಂದ ನಡೆಸಿದರು.

## ದೇಗುಲಗಳ ನವರಂಗ :

ಸಂಸ್ಕೃತಿಯನ್ನು ಮೆರೆಸುತ್ತಿರುವುವು ಎಂದರೆ ಶ್ರೀ ವಿಜಯನಾರಾಯಣಗುಡಿಯ ಭುವನೇಶ್ವರಿ ಅಥವಾ ನವರಂಗ. ಅನೇಕ ಪೌರಾಣಿಕ ಸಂದರ್ಭಗಳು, ರಾಮಾಯಣ – ಮಹಾಭಾರತ – ಭಾಗವತಾದಿ ಚಿತ್ರಗಳು ಇಕ್ಕಿ ತುಂಬಿ ನಿಂತಿದೆ. ರಾಜ ರಾಣಿಯರ ದರ್ಬಾರು, ವಾದ್ಯವಿದರು, ನರ್ತಕಿಯರು, ಧೇನುಕಾ, ಪೂತನಿ, ಶಕಟರ ವಧೆ, ಕಂಬಗಳಲ್ಲಿ ನಟರಾಜ, ಗಣಪತಿಯರ ವಿಗ್ರಹಗಳು ಯಕ್ಷ, ಅಪ್ಸರೆಯರು, ಕೇಶವ– ಇತ್ಯಾದಿ ವಿಗ್ರಹಗಳಿಂದ ನಯನ ಮನೋಹರವೆನಿಸಿವೆ. ಇಲ್ಲಿಯಂತೆಯೇ ಕಪ್ಪೆ ಚೆನ್ನಿಗನ ಗುಡಿಯಲ್ಲೂಕೂಡ. ಅಷ್ಟದಿಕ್ಪಾಲಕರು, ಕೇಶವಾದಿ ಚತುರ್ವಿಂಶತಿ ಮೂರ್ತಿಗಳು, ದೇವ–ದೇವತಾದಿಗಳು ವಿಷ್ಣುವಿಗಾಗಿ ಪ್ರಾರ್ಥಿಸುತ್ತಿರುವುದು, ವರಹಾವತಾರದಿಂದ ವಿಷ್ಣು ಭೂಮಿಯನ್ನ ಮೇಲೆತ್ತುತ್ತಿರುವುದು, ಹರಿ–ಹರರ ಮೂರ್ತಿಗಳು ಇಲ್ಲಿಯ ವೈಶಿಷ್ಟ್ಯ. ಈ ಎರಡೂ ಭುವನೇಶ್ವರಿಗಳು ಬಹು ಹೊಳಪಿನಿಂದ ನಯನ ಮೋಹಕವೆನಿಸಿವೆ.

## ದೇವಾಲಯದ ರಚನೆ :

ನಕ್ಷತ್ರಾಕಾರದ ನಾಲ್ಕುವರೆ ಅಡಿ ಎ ಜಗುಲಿ ಮೇಲೆ ಈ ದೇವಾಲಯಗಳು ಕಟ್ಟಲ್ಪ ಇದಕ್ಕೆ ಶ್ರೀಚಕ್ರವೆಂದು ಕರೆಯುತ್ತಾರೆ. ಜಗುಲಿಯ ಸುತ್ತ ಸಪ್ತಮಾತೃಕೆಯರ ಗುಡಿಗ ದೇವಾಲಯದ ಮುಖ್ಯದ್ವಾರಗಳಲ್ಲಿ ಹೊಯ ಲಾಂಛನಗಳಿವೆ. ದಶಾವತಾರದ ಚಿತ್ರ ಕೃಷ್ಣನನ್ನು ಬಿಟ್ಟು, ಬಲರಾಮನನ್ನು ಕೆತ್ತಿರು ಈ ದೇವಸ್ಥಾನದ ವೈಶಿಷ್ಟ್ಯ. ಗೋಡೆಯ ಸುತ್ತ ಆನೆ,ಕುದುರೆ,ರಥ,ಕಾಲಾಳುಗಳನ್ನು ಕೆತ್ತಿದ್ದು ಅವರ ಸೈನಿಕ ವ್ಯವಸ್ಥೆಯಾಗಿತ್ತು. ಗೋ ಚಿಕ್ಕ ಚಿಕ್ಕ ಗುಡಿಗಳ ನಾನಾ – ಅಂತಸ್ತಗ ಹೊಂದಿ, ಬೆರಗುಗೊಳಿಸುತ್ತದೆ. ಭಿ ಮೇಲ್ಭಾಗದಲ್ಲಿ ವಿಷ್ಣುವರ್ಧನನ ದರ್ಬಾ ಚಿತ್ರಣಗಳಿವೆ ಗುಡಿಯ ಭಿತ್ತಿಗಳಲ್ಲೆಲ್ಲಾ ಗಳು, ಪಕ್ಷಿಗಳು, ಪ್ರಾಣಿ, ಸೈನಿಕ, ಯ ದೇವಾನುದೇವತೆ, ತ್ರಿಮೂರ್ತಿಗಳ ಅವ ಮದನಿಕೆಯರ ಸುಂದರ ವಿಗ್ರಹಗಳು ತುಂ ನಮ್ಮನ್ನು ತನ್ಮಯಗೊಳಿಸುತ್ತವೆ.

---

ಶ್ರೀ ವಿಜಯನಾರಾಯಣ ಗುಡಿಯ ಭಿತ್ತಿಯ ಮೇಲ್ಭಾಗದ ಕಂಬಗಳ ಮೇಲೆ ಮುವ್ವತ್ತೆಂಟು ಮದನಿಕೆಯರ ವಿಗ್ರಹಗಳಿವೆ. ಅಪೂರ್ವ ಸೌಂದರ್ಯದಾಗರದ ಈ ಹೆಣ್ಣುಗಳನ್ನು ಒಮ್ಮೆ ಕಂಡರೆ ಮತ್ತೆ ಮತ್ತೆ ನೋಡುವಂತೆ ಮುಗ್ಧಗೊಳಿಸುತ್ತವೆ. ಅವುಗಳೆಂದರೆ ದರ್ಪಣಸುಂದರಿ, ಶುಕಭಾಷಿಣಿ, ವಾಸಂತಿ, ಕೀರವಾಣಿ, ಮರ್ಕಟ ಮೋಹಿನಿ, ಲೀ ಲಾ ಕಿ ರಾ ತೆ, ಮಂಜುಕಬರಿ, ತ್ರಿ ಭ ಂ ಗಿ ಮ ದ ನಿ ಕೆ, ಕಪಾಲ ಭೈರವಿ, ತಾಂಡವೇಶ್ವರಿ, ಮುರಳೀಧರೆ, ಗಾನಜೀವನೆ, ನಾಟ್ಯ ಮೋಹಿನಿ, ವೀಣಾಪಾಣಿ, ಮುಕುರ ಮುಗ್ಧೆ, ರಸಿಕ ಶಬರಿ, ವೀರಯೋಷಿತೆ, ಪೂವಿಡುಂಬಿ, ನಾಟ್ಯನಿಪುಣೆ, ರಾಗಯೋಗಿನಿ, ಸ್ವರ್ಗ ಹಸ್ತೆ, ಕೃತಕಶೂಲೆ, ಜಯನಿಷೇಧಿ, ನಾಟ್ಯಸುಂದರಿ, ಭಸ್ಮಾಸುರ ಮೋಹಿನಿ, ವಿಷಕನ್ಯೆ, ಹಾವ-ಸುಂದರಿ, ಶಕುನಶಾರದೆ, ಪಂಕನೃತ್ಯೆ, ನಾಗ ವೀಣಾ, ಭೂಷಣ ಪ್ರಿಯೆ, ಮಯೂರ ಶಿಖಿ, ಕೊರವಂಜಿ, ಕೇಶವೃಷ್ಟಿ, ಪಾದಾಂಗುಳೀಯೆ, ವಿಕಟವರ್ತಿನಿ, ಸಂಗೀತ ಲೋಲೆ, ಲಾಸ್ಯಭಾವೆ. ಈ ಎಲ್ಲ ಮದನಿಕೆಯರ ವಿಗ್ರಹಗಳೂ ಒಂದನ್ನೊಂದು ಯಾವ ರೀತಿಯಿಂದಲೂ ಹೋಲದೆ ವಿಶಿಷ್ಟವೆನಿಸಿ, ತಮ್ಮ ರೂಪರಾಶಿಯಿಂದ ನಮ್ಮನ್ನು ಬೆರಗುಗೊಳಿಸಿ ಮಂತ್ರ ಮುಗ್ಧರನ್ನಾಗಿಸುತ್ತವೆ. ಇಂಥವೇ ಚಿತ್ರಗಳನ್ನು ನಾವು ಅಜಂತಾದಲ್ಲಿ ವರ್ಣಗಾರಿಕೆಯ ಭವ್ಯತೆಯಾಗಿ ಕಾಣಬಹುದು. ಇವೆಲ್ಲಾ ಜೀವನ ರಸಿಕತೆಯನ್ನು ಮೌನವಾಗಿ ಬೋಧಿಸುವಂಥವು. ಈ ರೀತಿಯಲ್ಲಿ ಕಲೆಯ ಪರಿಪೂರ್ಣತೆಯ ಅನುಭವವನ್ನು ತಂದು ಕೊಟ್ಟ ಶಿಲ್ಪಿ ಶ್ರೇಷ್ಠರಾದ ನಾಗೋಜ, ಮಲ್ಲಿಯಣ್ಣ ಚಾವಣ, ಹುಲ್ಲಣ, ಹುಲಿಯಣ, ಮುಹಣ, ಜಕ್ಕಣ, ಮುಂತಾದವರು ಧನ್ಯರು. ತಲೆಗೂದಲು, ಉಗುರು, ಕಣ್ಣು ಮೂಗಿನ ಹೊಳ್ಳೆಗಳು ಸಹಜವಾಗಿರುವಂತೆ ಕಂಡರಿಸುವ ಶಕ್ತಿ ಇವರಿಗಲ್ಲದೆ ಮತ್ತಾರಿಗೆ ಸಾಧ್ಯ.

ಈ ದೇವಾಲಯವನ್ನು ಕಂಡ ಆಂಗ್ಲ ಶಿಲ್ಪ ಶಾಸ್ತ್ರಜ್ಞನೊರ್ವ, ಈ ಕಲಾಸಿರಿಯಿಂದಾಗಿ, ದೇಗುಲದ ಮೂಲದೇವರ ಆಶಯಕ್ಕೆ ಊನ ಉಂಟಾಯಿತು. ಭಕ್ತಿಯಿಂದ ಓಡಿಬಂದವರು ಸೌಂದರ್ಯದಲ್ಲಿ ಮುಳುಗಿ ಇಲ್ಲೇ ದೇವರನ್ನು ಕಂಡು ಮೂಲವಿಗ್ರಹವನ್ನು ನೋಡಲು ಕಾತರರಾಗುವುದಿಲ್ಲ. ಹಾಗಾಗಿ ಮೂಲ ಆಶಯಕ್ಕೆ ವಂಚನೆ ತಂದದ್ದು ಈ ಗುಡಿಯ ದೋಷವೆಂದು ಹೇಳಿಕೊಂಡಿದ್ದಾನೆ.

ಆದರೆ ಇಲ್ಲಿನ ಎಲ್ಲ ಮದನಿಕೆಯರೂ ಚೆನ್ನ ಕೇಶವನ ಅಂತಃಪುರ ಕನ್ನೆಯರು. ಅವನ ಸೇವೆಯಲ್ಲಿ ಅವನ ಭಕ್ತಿಯಲ್ಲಿ ಸಾಧಕರಾದವರು.



ಬೇಲೂರು

ಡಿ. ವಿ. ಜಿ. ಅವರ 'ಅಂತಃಪುರ ಗೀತೆಗಳು' ಕೃತಿಯಲ್ಲಿ ಇಲ್ಲಿನ ಒಬ್ಬೊಬ್ಬ ಮದನಿಕೆಯರ ಜೀವನೋದ್ದೇಶವನ್ನೂ, ಸಾಧನಾ ಪಥವನ್ನೂ ಸಂಗೀತಮಯವಾಗಿ ವಿವರಿಸಲಾಗಿದೆ. ಕನ್ನಡದ ಈ ಹಾಡುಗಳು ಕರ್ನಾಟಕದಲ್ಲೆಲ್ಲ ಕ್ಯಾಸೆಟ್‌ಗಳಾಗಿ ಕೇಳಿಸುತ್ತಿವೆ. ಮದನಿಕೆಯರ ಮನೋಭೂಮಿಕೆಯನ್ನು–ಎಲ್ಲ ಸೌಂದರ್ಯವೂ ದೇವಮೂಲವೆಂದೂ ದೇವಗಮ್ಯವೆಂದೂ–ವಿವರಿಸುತ್ತಿವೆ.

ಕನ್ನಡ ನಾಡಿನ ಯಾತ್ರೆ ಕೈಗೊಂಡಿದ್ದಾಗ ಗಾಂಧೀಜಿ ಬೇಲೂರನ್ನೂ ಸಂದರ್ಶಿಸಿದ್ದರು. ಇಲ್ಲಿ ಶಿಲಾಬಾಲಿಕೆಯರನ್ನು ಕಂಡು ಇಲ್ಲಿ ಬಹಳ ಹೊತ್ತು ತನ್ಮಯರಾಗಿದ್ದರು. ಅವರು ತಮ್ಮ ಸೇವಾ ಗ್ರಾಮಕ್ಕೆ ಹೋದನಂತರ ಹರಿಜನ ಪತ್ರಿಕೆಯಲ್ಲಿ ಸೀರೆಯ ನಿರಿಗೆಯಲ್ಲಿ ಚೇಳು ಸಿಕ್ಕಿ, ವಿಹ್ವಲಳಾಗಿ ನಗ್ನಳಾದ ಸುಂದರಿಯನ್ನು ಕಂಡು ಹೀಗೆ ವರ್ಣಿಸಿದರು– "ಈ ಸುಂದರಿ ಕಾಮನ ಬಾಣದೇಟಿನಿಂದ ತಪ್ಪಿಸಿಕೊಳ್ಳಲು ಹೆಣಗುತ್ತಿದ್ದಾಳೆ. ಕಡೆಗೆ ಕಾಮ ಮನಸೋತು, ಚೇಳಾಗಿ ಆಕೆಯ ಕಾಲಬಳಿ ತೆವಳಿದ್ದಾನೆ. ಚೇಳಾದ ಕಾಮ ಕುಟುಕಿದ ವೇದನೆ ಅವಳ ಮುಖದಲ್ಲಿ ಒಡ ಮೂಡಿದಂತಿತ್ತು". ಇವರೆಲ್ಲಾ ಸ್ವರ್ಗ ಸೌಂದರ್ಯದ ಪ್ರತಿನಿಧಿಗಳು ಹಾಗಾಗಿ ಬೇಲೂರು ಭೂಮಿಯ ಸ್ವರ್ಗ.

ದೇವಾಲಯದ ಒಳಗೆ ಕಂಡರಿಸಿ ಸವಾಲಿಗಾಗಿ, ಪ್ರತಿಸ್ಪರ್ಧಿಗಳಿಗಾಗಿ ನೆಲೆನಿಂತ ಕಲಾಪೂರ್ಣತೆಯ ಕಂಬ, 'ನರಸಿಂಹ ಕಂಬ' ಈ ಕಂಬದಲ್ಲಿ ಕಲ್ಲುಗಳ ಪದರಗಳಲ್ಲಿ ರಂಧ್ರ, ಮೋಟಾರು ಟೈರಿನಂಥ ಸಿಂಬಿಗಳು ನಮ್ಮನ್ನು ಬೆರಗು ಗೊಳಿಸುತ್ತವೆ. ಮೇಲ್ಛಾವಣಿಯಲ್ಲಿನ ಮಯೂರ ನೃತ್ಯ, ಶಾಂತಲೆಯ ವಿವಿಧ ಭಂಗಿಗಳು, ಗಂಧರ್ವ ಕನ್ಯೆಯರ ವಯ್ಯಾರ, ಕೇಶಶೃಂಗಾರಿಣಿಯರ ಬೆಡಗು, ಆಧುನಿಕ ಒಡವೆ–ತೊಡಿಗೆಗಳು ನಮ್ಮ ಇಹಲೋಕ ವ್ಯಾಪಾರವನ್ನೇ ಮರೆಯಿಸುತ್ತವೆ. ನುಣುಪಾದ ಕಲ್ಲುಗಳ ಈ ಕಾಂತಿ ಕಣ್ಣಿಗೆ ಹಬ್ಬವನ್ನೇ ಉಂಟುಮಾಡುತ್ತವೆ. ಕಂಡೇ ಧನ್ಯರಾಗಬೇಕು ಶಿಲೆಯ ಬೆಡಗಿನ ವೈಭವವನ್ನು.



ಹಳೇಬೀಡು



## ಹಳೆಬೀಡು :

ವಾಸ್ತುಶಿಲ್ಪ, ಕಲೆ, ಸಂಶೋಧನೆ, ಸೌಂದರ್ಯ ಮುಂತಾದ ವಿಶಿಷ್ಟತೆಗೆ ಹೆಸರಾದ ಗುಡಿಗಳ ಬೀಡಿದು. ಕ್ರಿ. ಶ. 850 ವರ್ಷಗಳ ಹಿಂದೆ ವೈಭವವಾಗಿ ಮೆರೆದು ದ್ವಾರಸಮುದ್ರವೆಂದು ಖ್ಯಾತಿವೆತ್ತ ಊರು. ಇಲ್ಲಿಯ ಕೆರೆ, ಸುತ್ತಿನ ಹಳ್ಳಿಗಳಲ್ಲಿನ ಬಸದಿ, ಮಂಟಪಗಳು ನಮ್ಮ ಕುತೂಹಲವನ್ನು ಹೆಚ್ಚಿಸುತ್ತವೆ.

ಇಲ್ಲಿನ ಪ್ರಮುಖ ದೇವಾಲಯಗಳೆಂದರೆ ಹೊಯ್ಸಳೇಶ್ವರ, ಶಾಂತಲೇಶ್ವರ, ಕೇದಾರೇಶ್ವರ ಮತ್ತು ಜೈನ ಬಸದಿಗಳು. ದ್ವಾರಸಮುದ್ರವೆಂದೇ ಖ್ಯಾತವಾಗಿದ್ದ ಕೆರೆ 9 ನೇ ಶತಮಾನದಲ್ಲಿ ರಾಷ್ಟ್ರಕೂಟರಿಂದ ಕಟ್ಟಲ್ಪಟ್ಟದ್ದು, 12–13ನೇ ಶತಮಾನದಲ್ಲಿ ಹೊಯ್ಸಳರ ರಾಜಧಾನಿಯಾಗಿದ್ದು ಮುಸ್ಲಿಮರ ದಾಳಿಗಳಿಂದಾಗಿ 'ಹಳೇಬೀಡು' ಮಾತ್ರವಾಗಿ ಇಂದೂ ಉಳಿದಿದೆ. ಇದನ್ನು ಲೂಟಿಗೈದವರಲ್ಲಿ ಕ್ರಿ. ಶ. 1311 ರಲ್ಲಿ ಮಲ್ಲಿಕಾಫರ್, ನಂತರ 1327 ರಲ್ಲಿ ಮಹಮದ್ ಬಿನ್ ತೊಘಲಕ್ ಪ್ರಮುಖರು.

ದೊಡ್ಡ ದೇವಸ್ಥಾನವು ಆರು ಅದಿ ನಕ್ಷತ್ರಾಕಾರದ ಜಗುಲಿಯ ಮೇಲೆ ನಿರ್ಮಿತವಾಗಿ ಹೊಯ್ಸಳೇಶ್ವರ, ಶಾಂತಳೇಶ್ವರ ಎಂಬ ಹೆಸರಿನಿಂದ ಅಕ್ಕಪಕ್ಕದಲ್ಲೆ ಕೂಡಿಕೊಂಡಿವೆ. ಪಶ್ಚಿಮವನ್ನುಳಿದು ಸುತ್ತಲೂ ಬೃಹತ್ತಾದ ಬಾಗಿಲುಗಳು ನಮ್ಮನ್ನು ಸ್ವಾಗತಿಸುತ್ತವೆ. ದೇವರು ಎದುರು ಬಾಗಿಲುಗಳಲ್ಲಿನ ದೊಡ್ಡ ಬಸವಣ್ಣಗಳು ನಮ್ಮನ್ನು ಬೆರಗುಗೊಳಿಸುವಂಥವು. ಈ ಗುಡಿಯು ಕೇತುಮಲ್ಲನೆಂಬ ರಾಜಭಕ್ತನಿ ನಿರ್ಮಿತವಾದ ಭಕ್ತಿಯ ಕಾಣಿಕೆ. ಇ ಹಿಂದೂ ವಾಸ್ತುಶಿಲ್ಪದ ಪ್ರತೀಕವೆನಿಸಿದೆ. ಗುಡಿಯ ಭಿತ್ತಿಗಳಲ್ಲಿಯೂ ಬೇಲೂರಿನಂತೆ ರಾಮಾಯಣ, ಮಹಾಭಾರತ, ಭಾಗ ಪುರಾಣಾದಿ ಚಿತ್ರಗಳು ಸುತ್ತಲೂ ವಿಮಾ ಗೊಂಡಿವೆ. ಇಲ್ಲಿನ ಬಾಗಿಲಿನ ನಟರಾ ವಿಗ್ರಹ ಸೊಗಸಾಗಿದೆ. ಕೇದಾರೇಶ್ವ ದೇವಾಲಯವನ್ನು ಕ್ರಿ. ಶ. 1217 ರಲ್ಲಿ ವಿ ವರ್ಧನ ಶಾಂತಲೆಯ ಹೆಸರಿನಲ್ಲಿ ಕಟ್ಟಿಸಿ ಇಲ್ಲಿಯ ಆಕರ್ಷಣೆಗಳೆಂದರೆ ಸುಂದರ ಶಿಖರ ಹಾಗೂ ನೂರಾ ಎಂಬತ್ತು ಪ್ರಭಾವಳಿಯ ಕೂಡಿದ ಪ್ರತಿಮೆಗಳು ಮತ್ತು ನವೀನ ಕಲ ಗುಣದ ಭುವನೇಶ್ವರಿ. ವಾಸ್ತುಶಿಲ್ಪಶಾಸ್ತ್ರ ನಾದ ಫರ್ಗ್ಯೂಸನನ್ನನ ಅಭಿಪ್ರಾಯದಂತೆ, ಗುಡಿಗಳು "ಭಾರತದ ವಾಸ್ತುಶಿಲ್ಪದ ಅನ ರತ್ನಗಳು. ಇಂಥವನ್ನು ಬೇರೆಲ್ಲೂ ಕಾಣಲಾರೆ

ಇಂದಿಗೂ ಬೇಲೂರು, ಹಳೇಬೀಡು ರ ಕೇಂದ್ರವಾಗಿವೆ. ಇವುಗಳನ್ನು ರಕ್ಷಿ ಸರ್ಕಾರ ಸಾಕಷ್ಟು ಬಿಗಿ ವ್ಯವಸ್ಥೆ ಮಾಡಿ ಅ ಮಾರ್ಗದರ್ಶಿಗಳನ್ನಿಟ್ಟು ವಿಚಾರ ಕುತ ವನ್ನು ತಣಿಸುತ್ತಿದೆ.

---

# ಓಂಕಾರ

ಓಂಕಾರ ಪ್ರಭವಾ ದೇವಾ
ಓಂಕಾರ ಪ್ರಭವಾಃ ಸ್ವರಾಃ ॥
ಓಂಕಾರ ಪ್ರಭವಂಸರ್ವಂ
ತ್ರೈಲೋಕ್ಯಂ ಸಚರಾಚರವ್ ॥

ಜೀವಿಗೆ ಜನನ ಮರಣ–ಇವು ಎಂದೂ ಬಿಡದ ನಂಟು. ಮೃತ್ಯುರೂಪಿಯಾದ ವ್ಯಾಧನ ಬಾಣ ಪ್ರಯೋಗವು ಯಾವಾಗ ಎಂಥ ಸಂದರ್ಭದಲ್ಲಿ ಆದೀತೆಂದು ಹೇಳಬರುವಂತಿಲ್ಲ. ಮುಕ್ತಕೋಟಿಯ ಜೀವರು ಮಾತ್ರ ಈ ಭಯದಿಂದ ದೂರಾದವರು. ಒಂದು ಕಾಲದಲ್ಲಿ ಸಾಮಾನ್ಯ ಮಾನವರಂತೆ ಅವರೂ ಸಹ ಮೃತ್ಯುಭಯದಿಂದ ಹೆದರುತ್ತಿದ್ದರು. ಈ ಭಯದಿಂದ ತಪ್ಪಿಸಿಕೊಳ್ಳುವ ಸನ್ನಾಹದಲ್ಲಿ ಅವರೆಲ್ಲ ನಿರತರಾದರು. ಮೃತ್ಯುವಿನ ಮುಂದೆ ಅವರೆಂದೂ ಶರಣಾಗತರಾಗಲಿಲ್ಲ. ತ್ರಯೀವಿದ್ಯಾ ಎಂಬುದನ್ನು ಸಂಪಾದಿಸುವದರಲ್ಲಿ ನಿರತರಾದರು. ಅಂದರೆ ಋಕ್ ಯಜುರ್ ಸಾಮ ಎಂಬ ವೇದ ತ್ರಯಗಳ ಗುಹೆಯನ್ನೇ ಅವರು ಆಶ್ರಯಿಸಿದರು. ಇಲ್ಲಿ ಛದ್ ಎಂಬ ಧಾತುವಿದೆ., ಅದು ಆಚ್ಛಾದನಾರ್ಥವನ್ನು ಸೂಚಿಸುವಂತಹದು. ಆಚ್ಛಾದನವೆಂದರೆ ಹೊದಿಕೆ. ಒಂದು ಅರ್ಥದಲ್ಲಿ ಅವರು ವೇದತ್ರಯಿಯನ್ನು ಹೊದೆದುಕೊಂಡರು. ಅದುದರಿಂದ ಛಂದಸ್ ಎಂಬ ಸಂಜ್ಞೆಯನ್ನೀಯಲಾಯಿತು.

ಇಷ್ಟುಮಾತ್ರದಿಂದ ದೇವತೆಗಳಿಗೆ ಬೆನ್ನಟ್ಟಿದ ಮೃತ್ಯು ದೂರಾಗಲಿಲ್ಲ. ನೀರಲ್ಲಿ ಸಂಚರಿಸುತ್ತಿದ್ದ ಮೀನನ್ನು ಕೊಕ್ಕರೆಯು ತನ್ನ ಬಲದಿಂದಳೆದುಕೊಳ್ಳುವಂತೆ ಮೃತ್ಯು ಎಲ್ಲಿದ್ದರೂ ತನ್ನ ಸ್ವಾಧೀನಪಡಿಸಿಕೊಳ್ಳುವಂತಹದು. ಆದುದರಿಂದ ದೇವತೆಗಳೆಲ್ಲ ಓಂಕಾರವಿದ್ದಲ್ಲಿ ಧಾವಿಸಿಬಂದರು. ವೇದತ್ರಯೀ ಭದ್ರವಾದ ಕೋಟೆ ಎಂದು ಭಾವಿಸಿದಲ್ಲಿ ಓಂಕಾರವೆಂಬುದು ಆ ಕೋಟೆಯ ಒಳಭಾಗದಲ್ಲಿರುವ ಇನ್ನೊಂದು ಭದ್ರವಾದ ಅರಕಿಲ್ಲೆಯಂತಿರುವುದು. ಆ ಕೋಟೆ ತಲುಪುವುದು ಬಹು ಕಷ್ಟಸಾಧ್ಯ. ಈ ಓಂಕಾರವನ್ನಾಶ್ರಯಿಸಿದುದರಿಂದ ಅವರಿಗೆ ಮೃತ್ಯುಭಯದಿಂದ, ಸ್ವಲ್ಪ ಉಸಿರಾಡುವಂತಾಯಿತು. ಪ್ರಾಚೀನ ಋಷಿಮುನಿಗಳು ಈ ಓಂಕಾರದ ಮಹತ್ತ್ವವನ್ನು ಕುರಿತು ಉಪನಿಷತ್ತುಗಳಲ್ಲಿ ಭರವಸೆಯ ಮಾತುಗಳನ್ನು ಹೇಳಿರುವುದುಂಟು. ಮೃತ್ಯುಭಯದಿಂದ ದೂರಾಗ ಬಯಸುವವರಿಗೆ ಉಪಾಸನೆ ಬಹುಮುಖ್ಯ. ಈ ಮಾತನ್ನು ನಾವು ಛಾಂದೋಗ್ಯ ಉಪನಿಷತ್ತಿನಲ್ಲಿ ಕಾಣಬಹುದು. ಓಂಕಾರವೆಂದರೆ ತ್ರಯೀವಿದ್ಯೆಯ ಸಾರವೆನಿಸುವುದು. ವೇದಗಳ ಮಹತ್ತ್ವ ಅಗಾಧವಾದುದು. ಹೀಗಿದ್ದರೂ ಓಂಕಾರವು ಮಾತ್ರ ಅವೆಲ್ಲವುಗಳಿಗಿಂತ ಮಿಗಿಲಾದುದು. ಅದು ಬಹು ಸಾಮರ್ಥ್ಯವುಳ್ಳದ್ದು. ಅಕ್ಷರ ವಿದ್ಯೆಯ ಮೂಲವೇ ಅದು. ಇಲ್ಲಿ ಅಕ್ಷರ ಎಂದರೆ ನಾಶರಹಿತ ಎಂದರ್ಥ. ಈ ಮಾತನ್ನೇ "ಓಂ ಇತ್ಯೇಕಾಕ್ಷರಂ ಬ್ರಹ್ಮ" ಎಂದಿದ್ದಾರೆ. ಓಂಕಾರವೇ ಬ್ರಹ್ಮಸ್ವರೂಪ. ವೇದಗಳ ಅಭ್ಯಾಸದಿಂದ ಸ್ವರ್ಗಪ್ರಾಪ್ತಿ ಆದರೆ ಓಂಕಾರಬಲದಿಂದ ಅಮೃತತ್ವವನ್ನು ಪಡೆಯಬಹುದು.

ಓಂಕಾರವೆಂಬುದು ರಸಗಳಲ್ಲಿ ಸರ್ವಶ್ರೇಷ್ಠ ರಸವು. ಸಕಲಭೂತಸಾರವೇ ಪೃಥ್ವೀ. ಜಲದ ಸಾರವೆಂದರೆ ವನಸ್ಪತಿ, ವನಸ್ಪತಿಸಾರವೇ ಮಾನವ, ಮಾನವ ಸಾರವೇ ವಾಕ್, ವಾಕ್ ಎಂಬುದರ ಸಾರವೇ ಋಕ್, ಈ ಋಕ್‌ದ ಸಾರವೇ ಸಾಮ. ಸಾಮದ ಸಾರವೇ ಉದ್‌ಗೀಥ. ಈ ಉದ್‌ಗೀಥ ಎಂಬುದನ್ನೇ ಓಂಕಾರವೆನ್ನುವರು. ಇದು ಸರ್ವಸಾರಗಳಿಂತ ಹಿರಿದಾದುದು. ವಿನೋಬಾಭಾವೆ ಈ ವಿಷಯವನ್ನು ಚನ್ನಾಗಿ ವಿಶ್ಲೇಷಣೆ ಮಾಡಿರುವರು

ಸ ಏಷ ರಸಾನಾಂ ರಸತಮಃ
ಪರಮಃ ಪರಾರ್ಧ್ಯೋಽಷ್ಟಮೋ
ಯ ಉದ್‌ಗೀಥಃ

ಓಂಕಾರಕ್ಕೆ ಪ್ರಣವ ಎಂದೂ ಉದ್‌ಗೀಥ ಎಂದೂ ಹೆಸರುಗಳಿವೆ. ಅದು ಎರಡುಮಾರ್ಗವನ್ನು ಸೂಚಿಸುವಂಥದು. ಯಾರಿಗೆ ಯಾವುದು ಸರಿಯನಿಸುವುದೋ ಅದನ್ನು ಹಿಡಿಯಬಹುದು. ನವ ಅಂದರೆ ಸ್ತುತಿಮಾಡು ಎಂದರ್ಥವು. ಅದಕ್ಕೆ ಪ್ರ ಎಂಬ ಉಪಸರ್ಗವನ್ನು ಜೋಡಿಸಿದಲ್ಲಿ ಪ್ರಣವ ಶಬ್ದದ ಉತ್ಪತ್ತಿಯಾಗುವದು. ಇದರ ಅರ್ಥ ವಿಷ್ಕೃ–ಪ್ರಕರ್ಷಕ ರೀತಿಯಲ್ಲಿ ಮಾಡಿದ ಸ್ತುತಿ, ಇಲ್ಲವೆ ಸ್ತೋತ್ರ ಎಂದು ಅರ್ಥವಾಗುವದು. ಹಾಗಾದಲ್ಲಿ ಉತ್ತಮವಾದ ಸ್ತೋತ್ರವಾವುದು ? ಯಾವದು ಪರಬ್ರಹ್ಮನನ್ನು ಕುರಿತಾದುದೋ ಅದು. ಇಲ್ಲಿ ಶಬ್ದಗಳನ್ನು ಬಾಗರಿಯಾಡಿಸಬೇಕಾಗಿಲ್ಲ. ಓಂಕಾರವು ಎಲ್ಲ ಶಬ್ದಗಳ ಸ್ತೋತ್ರಗಳನ್ನು ಸಮಾವೇಶ. ಅದು ಪರಬ್ರಹ್ಮನನ್ನೇ ಸಾಂಕೇತಿಕವೆಂದಿಟ್ಟು ಕೊಂಡಿರುವುದುಂಟು.

ಉದ್‌ಗೀಥ ಎಂಬುದು ಗೈ, ಗಾಯನ ಧಾತುವಿನಿಂದ, ಉತ್ ಎಂಬ ಉಪಸರ್ಗವನ್ನಂಟಿಸುವುದರಿಂದ ಈ ಶಬ್ದವನ್ನು ನಾವು ಕಾಣುತ್ತೇವೆ. ಇದೂ ಸಹ ಉತ್ತಮರೀತಿಯ ಗಾಯನ, ಅಥವಾ ಸ್ತೋತ್ರ ಎಂಬುದು ಅರ್ಥವನ್ನೀಯುತ್ತದೆ. ಒಟ್ಟಿನಲ್ಲಿ ಉತ್ತಮ ಸ್ಥಿತಿಯಲ್ಲಿರುವ ಅಕ್ಷರಗಳನ್ನು ಉಪಾಸನೆ ಮಾಡುವುದು ಎಂದರ್ಥ. ಈ ಉದ್‌ಗೀಥದ ಬೇರೆ ಇನ್ನೂ ಹೆಚ್ಚಿನ ಬೆಳಕನು ಕಾಣಬೇಕಾದಲ್ಲಿ ಛಾಂದೋಗ್ಯ ಹಾಗೂ ಬೃಹದಾರಣ್ಯಕಗಳನ್ನು ಚೆನ್ನಾಗಿ ಅಭ್ಯಾಸಮಾಡ ಬೇಕಾಗುವುದು.

ದೇವದಾನವರಿಬ್ಬರೂ ಪ್ರಜಾಪತಿಯ ಸಂತಾನರಾಗಿರುವರು. ಆದರೂ ಅವರಿಬ್ಬರ ಮಧ್ಯದಲ್ಲಿ ಯಾವಾಗಲೂ ಕಲಹಾದಿಗಳು ಇದ್ದೇ ಇರುವುವು. ಅದು ಸ್ವಾಭಾವಿಕ. ಕೆಲವು ಸಂದರ್ಭದಲ್ಲಿ ಅದು ವಿಪರೀತ ಮುಟ್ಟುವುದುಂಟು. ದೊಡ್ಡ ಯುದ್ಧಗಳೇ ಆದುದುಂಟು. ದೇವತೆಗಳು ದೈತ್ಯರನ್ನು ಸಂಹರಿಸುವುದಕ್ಕಾಗಿ ಈ ಉದ್‌ಗೀಥದ ಆಶ್ರಯ ಪಡೆದುಕೊಂಡರು. ಇದು ಮೊದಲು ದೈತ್ಯರಿಗೆ ತಿಳಿದು ಬರಲಿಲ್ಲ ಮೂಗಿನಿಂದ ಹೊರಬರುವ ವಾಯು ಉದ್‌ಗೀಥ ವಾಗಿರಬಹುದೋ ಎಂದು ಯೋಚಿಸತೊಡಗಿದರು. ಇದನ್ನು ಅಸುರರು ಕೆಡಿಸಲು ಪ್ರಯತ್ನಿಸತೊಡಗಿದರು. ಘ್ರಾಣೇಂದ್ರಿಯಕ್ಕೆ ಹೋಗಿ ಬರುವ ಗಾಳಿಯ ಮೇಲೆ ಅವರು ಪಾಪದ ಪ್ರಹಾರ ಮಾಡತೊಡಗಿದರು. ಇದರಿಂದಾಗಿ ವಾಯು ಮಲೀನವಾಯಿತು. ಸುಗಂಧದ ಬದಲಾಗಿ ಆ ವಾಯು ದುರ್ಗಂಧ ಹೊರಚೆಲ್ಲ ತೊಡಗಿತು. ಈ ಉಪಾಯವು ನಿರರ್ಥಕವಾದಾಗ ದೇವತೆಗಳು ವಾಣಿಯನ್ನು ಉದ್‌ಗೀಥದ ರೂಪದೊಂದಿಗೆ ಉಪಾಸನೆ ಮಾಡತೊಡದರು. ವಾಣಿಯ ಮೇಲೆಯೂ ಅಸುರರು ಪಾಪದ ಪ್ರಹಾರ ಮಾಡತೊಡಗಿದರು. ಇದರಿಂದಾಗಿ ಅದೂಕೂಡ ಪಾಪಯುಕ್ತವಾಯಿತು. ಅನಂತರದಲ್ಲಿ ಸತ್ಯದೊಂದಿಗೆ ಅಸತ್ಯ ಸ್ಪರ್ಧಿಸಿತು. ಈ ಎಲ್ಲ ಪ್ರಯೋಗಗಳು ಅಸಫಲವಾದುದನ್ನು ಕಂಡಾಗ ದೇವತೆಗಳು ಕಣ್ಣು, ಕಿವಿ, ಮನಸ್ಸು ಇವುಗಳನ್ನು ಉದ್‌ಗೀಥ ರೂಪದಿಂದ ಉಪಾಸನೆ ಮಾಡತೊಡಗಿದರು ಅಸುರರು ಸುಮ್ಮನಿರುತ್ತಾರೆಯೆ ? ಈ ಎಲ್ಲ ಇಂದ್ರಿಯಗಳ ಮೇಲೆ ಅವರು ಪಾಪದ ಭಾರವನ್ನು ಹೊರಿಸಿದರು. ಇದರಿಂದಾಗಿ ಯಾವುದನ್ನು ಕಣ್ಣು ಕಾಣಬಾರದೋ, ಕಿವಿಯು ಯಾವುದನ್ನು ಕೇಳಬಾರದೋ, ದೃಢ ಸಂಕಲ್ಪದಿಂದ ಮನಸ್ಸು ವ್ಯಾಕುಲವಾಗಬಾರದೋ ಅದೆಲ್ಲ ಆಗ ತೊಡಗಿದವು.

ಈ ವಿಪರೀತಗಳನ್ನೆಲ್ಲ ಅನುಭವಿಸಿದ ನಂತರ ನಿಜವಾದ ಉದ್‌ಗೀಥ ಯಾವುದು ಎಂಬುದನ್ನು ದೇವತೆಗಳು ತಮ್ಮ ಪ್ರಯತ್ನದಿಂದ ಕಂಡುಹಿಡಿದರು. ಹೃದಯಸ್ಥ ಪ್ರಾಣನನ್ನೇ ಅವರು ಉದ್‌ಗೀಥರೂಪದಲ್ಲಿ ಆರಾಧಿಸತೊಡಗಿದರು. ಅಸುರರು

ಶ್ರೀ ಆದ್ಯರಾಮಾಚಾರ್ಯ

ಅಡ್ಡಿ ಬಂದರೂ ಕೂಡ ಅವರ ಪ್ರಯತ್ನದಿಂದ ಮುಖ್ಯ ಪ್ರಾಣನಿಗೆ ಯಾವುದೇ ತರಹದ ಪರಿಣಾಮವಾಗಲಿಲ್ಲ. ಅಸುರರಿಗೆ ಬಹುದೊಡ್ಡ ಸೋಲೆನಿಸಿತು. ಅವರು ಮುಖ್ಯ ಪ್ರಾಣನ ಮೇಲೆ ತಮ್ಮ ಬಲ ಪ್ರಯೋಗ ಮಾಡಲು ಯೋಚಿಸಿದರು. ಗಾಜುಕಲ್ಲಿನ ಮೇಲೆ ಬಿದ್ದರೆ ಹೇಗಾಗಬೇಕೋ ಹಾಗಾಯಿತು ಅವರ ಸ್ಥಿತಿ.

ಉಪನಿಷತ್ತಿನ ಋಷಿಗಳು ಹೃದಯಸ್ಥನಾದ ಪ್ರಾಣನು ಪಾಪರಹಿತನಾಗಿದ್ದಾನೆಂದು ನಿರ್ಧರಿಸಿದರು. ಆತನಲ್ಲಿ ಸ್ವಾರ್ಥವೆಂಬುದಿಲ್ಲ "ಲೋಭಮೂಲಾನಿ ಪಾಪಾನಿ"–ಎಲ್ಲ ಪಾಪಗಳಿಗೆ ಲೋಭ ಮೂಲಕಾರಣ. ಆದರೆ ಪ್ರಾಣದೇವನು ತಿಂದುದನ್ನು ಕುಡಿದುದನ್ನು ತನ್ನ ಪಾಲಾಗಿ ಸ್ವೀಕರಿಸುವುದಿಲ್ಲ. ಆದುದರಿಂದಲೇ ಆತನು ಸಕಲೇಂದ್ರಿಯಗಳಲ್ಲಿ ಶ್ರೇಷ್ಠನಾದವನು. ಈ ಪ್ರಾಣನೊಂದಿಗೆ ಉದ್ಗೀಥವನ್ನು ಜೋಡಿಸಿದಲ್ಲಿ ಪ್ರಣವ ಎಂಬುದು ಹಬ್ಬುವುದು. ಇದು ಋಷಿಗಳು ಮಾಡಿಕೊಂಡ ನಿರ್ಧಾರವು.

ಛಾಂದೋಗ್ಯದಲ್ಲಿ ಮೂಲಭೂತವಾದ ದಾಂಪತ್ಯದ ಕಲ್ಪನೆ ಮಾಡಲಾಗಿದೆ. "ತದ್ವಾ ಏತನ್ಮಿಥುನಂ ಯದ್ವತ್ ಪ್ರಾಣಶ್ಚ" ಅಂದರೆ ವಾಣಿ ಹಾಗು ಪ್ರಾಣ ಇವರು ಒಂದೆಡೆ ಮಿಳಿತರಾದುದು ಎಂದರ್ಥ. ಇವರಿಬ್ಬರ ಸಂಯೋಜನೆಯಿಂದಾಗಿ ಓಂಕಾರದ ಉಚ್ಚಾರವಾಗುತ್ತದೆ. ಇದನ್ನು ಇದನ್ನು ಸ್ವಲ್ಪ ಬಿಡಿಸಿ ಹೇಳಬೇಕೆಂದರೆ ಓಂಕಾರ ರೂಪೀ ಬಾಲಕನನ್ನು ವಾಣಿ ಹಾಗೂ ಪ್ರಾಣರು ರಕ್ಷಿಸುತ್ತಾರೆ ಎಂದರ್ಥ.

ಪ್ರಣವಕ್ಕೆ ಅಮೃತತ್ವದ ಪ್ರಾಪ್ತಿಯಾಗಬೇಕಿದ್ದಲ್ಲಿ ಓಂಕಾರರೂಪದಲ್ಲಿ ಅದರ ಉಪಾಸನೆಯನ್ನು ಮಾಡಬೇಕು. ಸೂರ್ಯ ಹಾಗೂ ಪ್ರಾಣ ಇವರಿಬ್ಬರೂ ಸಮಪ್ರಮಾಣರೇ. ಹೇಗೆ ಸೂರ್ಯದೇವನು ಶಾಖವನ್ನೀಯುವನೋ ಹಾಗೆ ಜೀವನಿಗೆ ಅಗತ್ಯವಾದ ಉಸಿರನ್ನು ದಯಪಾಲಿಸುವವನು ಪ್ರಾಣದೇವನು. ಸೂರ್ಯ ಎಂದರೆ ಸ್ವರ. ಅದಕ್ಕೂ ಮುಂದಿನ ಭಾಗದಲ್ಲಿ ಹೇಳಬೇಕೆಂದರೆ ಗತಿವಾನ್. ಪ್ರಾಣನೂ ಹಾಗೆಯೆ. ದೇಹದಲ್ಲಿಯ ಈ ಪ್ರಾಣ ಹಾಗೂ ಪ್ರಕಾಶಮಾನನಾದ ಸೂರ್ಯ ಇವರಿಬ್ಬರ ಉಪಾಸನೆಯನ್ನು, ಓಂಕಾರರೂಪದಲ್ಲಿ ಮಾಡಬಹುದು. ಈ ಪ್ರಾಣನನ್ನು ಯಾರು ಒಲಿಸಿಕೊಳ್ಳುತ್ತಾರೆಯೋ ಅವರನ್ನು ಆಂಗಿರಸರು ಎಂದು ಗುರುತಿಸುವದುಂಟು. ಬೃಹಸ್ಪತಿಯೂ ಸಹ ಉದ್ಗೀಥರೂಪದಿಂದ ಉಪಾಸನೆಯನ್ನು ಮಾಡಿದುದುಂಟು. ವಾಣಿ ಎಂದರೇನೆ ಬೃಹತಿ ಅವಳ ಪತಿಯೇ ಪ್ರಾಣ, ಇವರಿಬ್ಬರನ್ನು ಬೃಹಸ್ಪತಿ ಎಂದು ಸಂಬೋಧಿಸಿದುದುಂಟು.

ಓಂಕಾರದಲ್ಲಿ ಅಕಾರ ಉಕಾರ ಮಕಾರ–ಹೀಗೆ ಮೂರು ವರ್ಣಗಳಿವೆ. ಇವುಗಳನ್ನು ಮಾತ್ರಾಗಳು ಎಂದೆನ್ನುವುದುಂಟು. ಅಲ್ಲದೆ ಸಂದರ್ಭೋಚಿತವಾಗಿ ಬೇರೆಬೇರೆ ಅರ್ಥಗಳೂ ಉಂಟು. ಬ್ರಹ್ಮಾಂಡವನ್ನು ಕುರಿತು ಯೋಚಿಸತೊಡಗಿದಾಗ ಆ ಗೋಲವು ಈ ಮೂರೂ ಮಂತ್ರಗಳಿಂದ ವಿಭಜಿಸಲ್ಪಟ್ಟಿರುವದು. ಹೇಗೆಂದರೆ ಇದರಲ್ಲಿಯ ಅ ಎಂದರೆ ಪೃಥ್ವಿ, ಉ ಎಂದರೆ ಅಂತರಿಕ್ಷ, ಮ್ ಎಂದರೆ ದ್ಯೌಲೋಕವು. ಇದು ವಿಶ್ವದ ಅವಸ್ಥಾತ್ರಯವೆಂದೆನಿಸುವುದು. ಅಕಾರವು ಉತ್ಪತ್ತಿಯನ್ನು ಉಕಾರವು ಸ್ಥಿತಿಯನ್ನು ಮಕಾರವು ಲಯವನ್ನು ಪ್ರದರ್ಶಿಸುವುದು. ಇದೇರೀತಿಯಲ್ಲಿ ಜೀವಾತ್ಮನ ಅವಸ್ಥೆಯಾದರೂ ಸಹ ವಿಶ್ವ, ತೈಜಸ, ಪ್ರಾಜ್ಞಗಳಿಂದ ಕೂಡಿದುದಾಗಿದೆ.

ವೈಶ್ವಾನರನು ಆತ್ಮನೆಂದೆನಿಸಿಕೊಳ್ಳುವವನು. ಆತ ಸರ್ವಶಬ್ದವಾಚ್ಯ, ಹಾಗೂ ವ್ಯಾಪ್ತಿಯುಳ್ಳವನು. ಓಂಕಾರದಲ್ಲಿರುವ ಅಕಾರವನ್ನು ಹೆಚ್ಚು ಬಲವಾಗಿ ಧ್ಯಾನ ಮಾಡುವುದರಿಂದ ಅಂಥವರಿಗೆ ಆದಿಭೌತಿಕ ಐಶ್ವರ್ಯವು ಪ್ರಾಪ್ತವಾಗುವುದು. ಇವರು ವ್ಯಾಸಂಗಿಗಳಾಗಿ, ತಪಸ್ವಿಗಳಾಗಿ ಬ್ರಹ್ಮವರ್ಚಸ್ಸಿನಿಂದ ಕೂಡಿದವರಾಗಿರುವರು. ಲೋಕವು ಇಂಥ ಮಹನೀಯರನ್ನು ಪೂಜನೀಯ ಸ್ಥಾನದಲ್ಲಿ ಕಾಣುವುದುಂಟು.

ಇನ್ನು ಉಕಾರವು ಸ್ವಪ್ನಾವಸ್ಥೆಯಲ್ಲಿರುವ ತೈಜಸ ಎಂಬ ಹೆಸರಿನಿಂದ ಗುರುತಿಸಲ್ಪಡುವ ಆತ್ಮವು. ಉಕಾರವು ಉತ್ಪತ್ತಿ ಉತ್ಕ್ರಾಂತಿಯ ಸೂಚಕವು, ಉಕಾರವು ಹಿಂದಿನ ಹಾಗೂ ಮುಂದಿನ ಮಾತುಗಳಿಗೆ ಸಂಬಂಧವಿರುವಂತಹುದು. ಆಧಿಭೌತಿಕ ಐಶ್ವರ್ಯದೊಂದಿಗೆ ಆಧಿದೈವಿಕವಾದ ಸಾಮರ್ಥ್ಯವು ಬೇಕಾಗಿದ್ದಲ್ಲಿ ಪ್ರಣವೋಪಾಸಕರು ಉಕಾರದಮೇಲೆ ಹೆಚ್ಚಿನ ಧ್ಯಾನವನ್ನೀಯಬೇಕಾಗುವುದು. ಉಕಾರವು ತೇಜೋರೂಪಿಯಾದ ಸೂರ್ಯದೇವನ ಅಂಶವೆನಿಸುವುದು. ಆ ದೇವನ ಅನುಗ್ರಹಬಲದಿಂದ ಮಾನವನಿಗೆ ತೇಜಸ್ಸು ಪ್ರಾಪ್ತವಾಗುತ್ತದೆ.

ಇನ್ನು ಮೂರನೆಯ ಮಾತ್ರಾ ಮಕಾರ. ಇದು ಸುಷುಪ್ತಾವಸ್ಥೆಯಲ್ಲಿರುವ ಪ್ರಾಜ್ಞರೂಪ
ನಾದ ಆತ್ಮ ಎಂದೆನಿಸಿಕೊಳ್ಳುವುದು.
ಮಾತ್ರಾದಲ್ಲಿ ಹೆಚ್ಚುಗಮನವನ್ನಿತ್ತರೆ ಅಂಥ
ಬ್ರಹ್ಮಸಾಕ್ಷಾತ್ಕಾರವು ಲಭಿಸುವುದು. ಅ
ಜೀವನು ಮೃತ್ಯುರಹಿತನಾಗುವನು.

ಈ ಮೂರೂ ಮಾತ್ರಾಗಳೆಂದರೆ ಮೂರು
ಗಳೆಂದು ಹೇಳಬಹುದು. ಇಂದ್ರಿಯಗ
ಗಳಿಸುವ ಕರ್ಮವು ಮಾನಸ ಕರ್ಮವೆನಿಸುವ
ಸಾಧಕನಾದವನು ತನ್ನ ಅಂತರ್ಬಾಹ್ಯ ಕವ
ದಿಗಳಲ್ಲಿ ಯೋಗ್ಯರೀತಿಯಲ್ಲಿ ಈ ಶಕ್ತಿಗ
ಪರೀಕ್ಷಿಸಿಕೊಳ್ಳಬೇಕು. ಮುಂದಿನ ಅರ್ಧಮಾ
ಇದು ಸರ್ವತೋಮುಖವಾದ ಸಹಿಷ್ಣುತೆಯ
ಹಾಗೂ ಭಗವದ್ಭಾವವನ್ನು ಸೂಚಿಸುವ
ಹಾಗೂ ಪಾಪಪುಣ್ಯದಿಂದ ಅಲಿಪ್ತವೆಂ
ಕೊಳ್ಳುವುದು. ಓಂಶಾಂತಿಃ ಓಂಶಾಂತಿಃ
ಶಾಂತಿಃ ಹೀಗೆ ಮೂರುಸಲ ಪಠಿಸುವದರಿಂದ
ನಿಗೆ ಅಂತಸ್ಥವಾದ ಶಾಂತಿಯು ಲಭಿಸುವ
ಈ ಮಾತ್ರಾ ನಮ್ಮ ಕೈವಶವಾದಲ್ಲಿ ಸಾಧ
ದವನಿಗೆ ವಿಶ್ವವ್ಯಾಪ್ತಿಯ ಅರಿವಾಗತೊಡಗು
ಆತನ ಅನುಭವ ಬೆಳೆಯುತ್ತ ಹೋಗು
ಆದುದರಿಂದಲೇ ಯಜ್ಞ, ಯಾಗ, ಜಪ,
ಮೊದಲಾದ ಕ್ರಿಯೆಗಳನ್ನಾರಂಭಿಸುವಾಗ
ಕಾರದಿಂದಲೇ ಪ್ರಾರಂಭಮಾಡುವ ಸಂಪ್ರದ
ವಿದೆ. ಈ ವಿಚಾರವನ್ನು ಕುರಿತು ಗೀತೆಯಲ್ಲಿ

ತಸ್ಮಾ ದೋಮಿ ತ್ಯುದಾಹೃತ್ಯ
ಯಜ್ಞದಾನ ತಪಃ ಕ್ರಿಯಾಃ
ಪ್ರವರ್ತಂತೇ ವಿಧಾನೋಕ್ತಾಃ
ಸತತಂ ಬ್ರಹ್ಮವಾದಿನಾಮ್

ಎಲ್ಲ ಯಾಗಾದಿಗಳನ್ನು ಓಂಕಾರಮಂತ್ರದಿಂ
ಆರಂಭಿಸಿದುದುಂಟು. ಯಾಕೆಂದರೆ ಅದು
ಣೆಯ ಸೂಚಕ. ಕೆಲವು ಸಂದರ್ಭಗಳಲ್ಲಿ ಅಧ್ವ
ಪದಾದಿಯಲ್ಲಿದ್ದವರಿಗೆ ಬ್ರಹ್ಮನಿಂದಾಗಲಿ,
ಯಜಮಾನನಿಂದಾಗಲಿ ಅರ್ಪಣೆಯನ್ನೀಯ
ಗಲೂ ಕೂಡ ಸಂಜ್ಞಾರ್ಥರೂಪದಲ್ಲಿ ಓಂ ಎ
ಹೇಳುವುದುಂಟು; ಯಾಕೆಂದರೆ ಬ್ರಹ್ಮವಿದ
ಗುಟ್ಟೆಲ್ಲ ಈ ಓಂಕಾರದಲ್ಲಿಯೆ ಅಡಕವಾಗಿರು
ರಿಂದ ಅದು ಮಾನವನಿಗೆ ವರವಾಗಿ ದೊರೆ
ವಂತಾಯಿತು: ಸಕಲಪುರುಷಾರ್ಥಗಳ ಸಿದ್ಧಿ
ಈ ಓಂಕಾರದಲ್ಲಿ ಅಡಕವಾಗಿರುವುದೆಂಬು
ತಿಳಿದು ಆಚರಿಸುವರಲ್ಲಿಯೇ ಮಾನವನ ಕಲ
ವಿರುವುದು.



# ಸತ್ಯಬೋಧ ತೀರ್ಥರು

ಶ್ರೀ ಸತ್ಯಬೋಧೋ ನಿಜ ಕಾಮಧೇನುಃ
ಮಾಯಾತಮಃ ಖಂಡನ ಚಂಡ ಭಾನುಃ॥
ದುರಂತ ಪಾಪಪ್ರದಹ ಕೃಶಾನುಃ
ದೇಯಾನ್ಮಮೇಷ್ಟಂ ಗುರುರಾಜ
ಸೂನುಃ ॥

ಶ್ರೀ ಸತ್ಯಬೋಧ ರಾಯರ ದಿವ್ಯಪಾದ
ಪದುಮವ ಕಂಡು ನಾ ಧನ್ಯನಾದೆನೆಂದು
—ಜಗನ್ನಾಥದಾಸರು.

ಶ್ರೀ ಸತ್ಯಬೋಧ ರಾಯರು ಮಧ್ವ ಮತದ ಮೇರುಗಲ್ಲು, ಮಹಾಮಹಿಮ ತಪೋನಿಧಿಗಳಾದ ಯತಿಗಳು, ಕೋಟಿ ಶಿಷ್ಯರಿಗೆ ಸನ್ಮಾರ್ಗ ತೋರಿಸಿದ ಅಪರೋಕ್ಷ ಜ್ಞಾನಿಗಳು, ಮಹಾ ಪುರುಷರು. ಇವರ ಜೀವನ ಪಾವನತಮ, ಇಂತಹ ಮಹಾಮಹಿಮರ ಸೇವೆ ನಮ್ಮೆಲ್ಲ ಶಿಷ್ಯ ವೃಂದಕ್ಕೆ ಅತ್ಯವಶ್ಯ.

ಪ್ರಪಂಚದಲ್ಲಿ ಇಂತಹ ಮಹಾಮಹಿಮರು ಜನಿಸುವುದು ವಿರಳ. ಅಹೋಬಲ ಲಕ್ಷ್ಮೀ ನರಸಿಂಹ ದೇವರ ಕೃಪೆಯಿಂದ ಕರ್ನಾಟಕ ರಾಜ್ಯದ ರಾಯಚೂರಿನಲ್ಲಿ ವಾಸಸ್ಥರಾಗಿದ್ದ ಹರಿಯಾಚಾರ್ಯರು ಮತ್ತು ಅರಳಾಂಬಿಕೆ ಎಂಬ ಪುಣ್ಯ ದಂಪತಿಗಳ ಉದರದಲ್ಲಿ ಕ್ರಿ. ಶ. 1710 ರಲ್ಲಿ ಜನಿಸಿದರು, ಪುತ್ರ ರತ್ನದ ಸಾತ್ವಿಕ ಹಾಗೂ ಪ್ರತಿಭಾ ಲಕ್ಷಣ ಮನೆಯಲ್ಲಿ ಎಲ್ಲರಿಗೂ ಆನಂದವನ್ನುಂಟು. ಮಾಡಿತ್ತು. ಮುಂದೆ ಈ ಪುತ್ರ ರತ್ನವೇ "ಸತ್ಯಬೋಧ ತೀರ್ಥರು" ಎಂಬ ನಾಮದಿಂದ ಲೋಕೋದ್ಧಾರದ ಮಹಾನ್ ಯೋಗಿಗಳಾಗುತ್ತಾರೆ. ಈ ಪುತ್ರ ರತ್ನಕ್ಕೆ "ರಾಮಾಚಾರ್ಯ" ಎಂಬ ನಾಮಕರಣವನ್ನು ಮಾಡಲಾಗುತ್ತದೆ.

ಬಾಲಕನಿಗೆ 5 ವರ್ಷಗಳು ತುಂಬಿದಾಗ ಉಪನಯನಾದಿಯನ್ನು ನಡೆಸಲಾಯಿತು. ತಮ್ಮ ತಂದೆಯಲ್ಲೆ ವೇದಾಧ್ಯಯನವನ್ನು ಪ್ರಾರಂಭ ಮಾಡಿದರು. ಹೀಗೆ ಇರುತಿರಲಿಕ್ಕೆ ಉತ್ತರಾದಿ ಮಠಾಧೀಶರಾದ ಸತ್ಯಪ್ರಿಯ ತೀರ್ಥರು ಆಗಮಿಸಿದರು. ಅವರ ಆಕಸ್ಮಿಕ ದೃಷ್ಟಿ ಬಾಲಕ ರಾಮಾಚಾರ್ಯರ ಮೇಲೆ ಬಿದ್ದಿತು. ಶ್ರೀಗಳು ತೇಜಸ್ವಿಯಾದ ಸಾತ್ವಿಕ ಲಕ್ಷಣವುಳ್ಳ ಈ ಬಾಲಕನನ್ನು ತಮಗೆ ಒಪ್ಪಿಸಿ—ಎಂದು ಹರಿಯಾಚಾರ್ಯ ದಂಪತಿಗಳಿಗೆ ಬಾಯಿಬಿಟ್ಟು ಕೇಳಿದಾಗ, ಬಹುದುಃಖದಿಂದ ಹರಿಯಾಚಾರ್ಯ ದಂಪತಿಗಳು ಶ್ರೀಗಳಿಗೆ ಬಾಲಕನನ್ನು ಒಪ್ಪಿಸಿ ಕೃತಾರ್ಥರಾದರು. ರಾಮಾಚಾರ್ಯರು ಮಠದಲ್ಲೆ ಸತ್ಯ ಪ್ರಿಯರ ಶ್ರೀಗಳವರ ಶಿಷ್ಯರಾಗಿ ಅನೇಕ ಗ್ರಂಥಗಳ ಅಧ್ಯಯನ ಮಾಡಿದರು. ಧಾರ್ಮಿಕ ವಿಷಯಗಳ ಜ್ಞಾನ ಸಂಪಾದಿಸಿ ವಿದ್ಯಾಪಾರಂಗತರಾದರು. ರಾಮಾಚಾರ್ಯರು ಸಂಸ್ಕೃತದಲ್ಲಿ ವಾದಕ್ಕೆ ಕುಳಿತಾಗ ದೊಡ್ಡ ದೊಡ್ಡ ವಿದ್ವಾಂಸರನ್ನು ಸೋಲಿಸುವ ಚಾತುರ್ಯವನ್ನೂ ಪಡೆದುಕೊಂಡರು. ಸಮಯಾನುಸಾರವಾಗಿ ಶ್ರೀಗಳು ಇವರಿಗೆ ಸವಣೂರಿನ ಶ್ರೀಮಂತರ ಕನ್ಯೆಯಾದ ಸಾಧ್ವಿಯಾದ ಗಿರಿಯಮ್ಮನೊಂದಿಗೆ ವಿವಾಹ ಮಾಡಿದರು. ಆಕೆ ಇವರಿಗೆ ಅನುರೂಪಳಾದ ಪತ್ನಿಯಾದಳು. ವರಾಹ ಸೇತುನಾರಾಯಣ ಎಂಬ ಇಬ್ಬರು ಮಕ್ಕಳು ಇವರಿಗೆ ಜನಿಸಿದರು. ಇತ್ತ ಸತ್ಯಪ್ರಿಯ ಶ್ರೀಗಳು ದೇಶ ಸಂಚಾರಗೈದು ಮಧ್ವ ಮತದ ಪ್ರಚಾರ ಮಾಡಿ ಮಾನಾಮಧುರೆಗೆ ಬಂದು ತಲುಪಿದರು. ಅವರಿಗೆ ಆಗಲೇ ಸಂಚಾರದಿಂದ ಅಸ್ವಸ್ಥತೆ ಉಂಟಾಗಿ ಬಹಳ ಆಯಾಸವುಳ್ಳವರಾಗಿದ್ದರಿಂದ ಮುಂದಿನ ಪೀಠಾಧಿಕಾರಿಯ ಬಗ್ಗೆ ವಿಚಾರ ಮಾಡ ಹತ್ತಿ, ಪಂಡಿತ ರತ್ನರಾದ ರಾಮಾಚಾರ್ಯರಿಗೆ ಕರೆ ಕಳುಹಿಸಿದರು ರಾಮಾಚಾರ್ಯರು ಶ್ರೀಗಳವರ ಚರಣಾರವೃಂದಗಳಲ್ಲಿ ಎರಗಿದಾಗ.'ಉತ್ತರಾದಿಮಠದ ಸರ್ವಾಧಿಕಾರಿ ನೀನೆ; ಕಾರಣ ಸನ್ಯಾಸಾಶ್ರಮ ಸ್ವೀಕರಿಸಬೇಕೆ'ಂದಾಗ, ರಾಮಾಚಾರ್ಯರು ಬಿಚ್ಚು ಮನಸ್ಸಿನಿಂದ ಒಪ್ಪಿಕೊಂಡರು. ಆಪ್ರಕಾರ ಕ್ರಿ.ಶ. 1742 ನೆಯ ರುಧಿರೋದ್ಗಾರಿ ಸಂವತ್ಸರದ ಚೈತ್ರ ಶುದ್ಧ ತ್ರಯೋದಶಿಯಂದ ರಾಮಾಚಾರ್ಯರಿಗೆ ಸನ್ಯಾಸಾಶ್ರಮ ನೀಡಿ "ಸತ್ಯಬೋಧ ತೀರ್ಥರು" ಎಂದು ನಾಮ ಕರಣ ಮಾಡಿದ. ನಂತರ ಸತ್ಯಪ್ರಿಯ ತೀರ್ಥರು ಮಾನಾ ಮಧುರೆಯಲ್ಲಿ ವೃಂದಾವನ ಪ್ರವೇಶಿಸಿದರು.

ಸತ್ಯಬೋಧ ತೀರ್ಥರು ಉತ್ತರಾಧಿ ಮಠದ ಪೀಠವನ್ನು ಅಲಂಕರಿಸಿ ದೇಶ ದಿಗ್ವಿಜಯ ಹಾಗೂ ಹಿಂದು ಧರ್ಮದ ಜಾಗೃತಿ ಮತ್ತು ಮಧ್ವಮತದ ಪ್ರಚಾರ ಮಾಡುತ್ತಾ ತಮ್ಮ ತಪಃ ಪ್ರಭಾವದಿಂದ ಸಮಾಜ ಉದ್ಧರಿಸಿದರು. ಅನೇಕರನ್ನು ಧರ್ಮದ ಸನ್ಮಾರ್ಗಕ್ಕೆ ಎಳೆದರು. ಇಷ್ಟೇ ಅಲ್ಲದೆ ಅಂದಿನ ಹಿಂದು ಮುಸಲ್ಮಾನ ಮಹಾರಾಜರನ್ನು ತಮ್ಮ ತಪೋ ಮಹಿಮೆಯಿಂದ ಪ್ರಭಾವಿತರನ್ನಾಗಿ ಮಾಡಿದರು. ಈರೀತಿ ಕಾರ್ಯ ನಿರ್ವಹಿಸಿ ಸಮಾಜಕ್ಕೆ ಕುಂದು ಕೊರತೆಗಳು ತೊಂದರೆಗಳು ಬರದ ಹಾಗೆ ಮಾಡಿದರು, ಸತ್ಯಬೋಧ ತೀರ್ಥರು ಸಾಮಾಜಿಕ ಸಾಮರಸ್ಯ ಕಾಯ್ದುಕೊಂಡು ಜಾತಿ, ಭೇದ ಮಾಡದೆ ಅನೇಕ ಶಿಷ್ಯರನ್ನು ಮುಂದೆ ತಂದರು. ಶ್ರೀಗಳವರ ಪ್ರಭಾವದಿಂದ ಗುತ್ತಿಯ ಮಹಾರಾಜ, ಮರಾಠಿ ರಾಮರಘೋಬ ಬೋಸಲೆ, ಛತ್ರೇಸಿಂಗ ಗಾಯಕವಾಡ, ಪುಣೆಯ ಪೇಶ್ವೆಯವರು, ಜ್ಞಾನೋಜಿ ಲಿಂಬಾಳಕರ, ಹೈದರ ಅಲಿ, ಟೀಪು ಸುಲ್ತಾನ, ಆರ್ಕಾಟ ನವಾಬ, ಸವಣೂರ ನವಾಬ, ಶ್ರೀರಂಗ ಪಟ್ಟಣದ ರಾಜ—ಹೀಗೆ ಅನೇಕ ರಾಜರು ಮುಂದೆ ಬಂದು ಇವರ ಶಿಷ್ಯರಾಗಿ ವಿಶ್ವಾಸದಿಂದ ಅವರ ಸೇವೆಗೈದು ಗುರುಗಳ ಆದೇಶದಂತೆ ಸಮಾಜಕ್ಕೆ ಉಪಕರಿಸಿದರು.

ಹರಿದಾಸ ಸಾಹಿತ್ಯ ಬೆಳೆಸುವುದರಲ್ಲೂ ಮತ್ತು ಪ್ರಸಾರ ಮಾಡುವುದರಲ್ಲೂ ಸತ್ಯ

ಶ್ರೀ ಕೇಶವದಾಸ ವಿ. ದೇಶಪಾಂಡೆ

ಬೋಧ ತೀರ್ಥರು ಅತಿ ಹೆಚ್ಚಿನ ಕೊಡುಗೆ ನೀಡಿದರು ವಿಜಯದಾಸರು, ಗೋಪಾಲ ದಾಸರು, ಜಗನ್ನಾಥದಾಸರು. ಕದರ ಮಂಡಲಗಿ ಹನುಮಯ್ಯ ದಾಸರು. ವ್ಯಾಸ ವಿಠಲರು, ಮೊದಲಾದ ಮಹಾನ್ ದಾಸ ವರ್ಯರಿಗೆ ಮಾರ್ಗದರ್ಶಕರಾಗಿ ತತ್ತ್ವೋಪದೇಶಕರಾಗಿ ದಾಸಸಾಹಿತ್ಯವನ್ನು ಎತ್ತಿ ಹಿಡಿಯಲು ಪ್ರೇರಿಸಿ ಉಪಕಾರಗೈದರು.

ಹೀಗೆ ಇರಲು ಶ್ರೀಗಳು ತಮ್ಮ ಕೊನೆಯ ವಾಸ್ತವ್ಯ ಸ್ಥಳವನ್ನಾಗಿ ಸುವರ್ಣಪೀಠಪುರ ಅಂದರೆ ಈಗಿನ ಸವಣೂರನ್ನು ಆರಿಸಿದರು. ಇಲ್ಲಿಯ ನವಾಬನು ಇವರ ತಪೋಮಹಿಮೆಯಿಂದಾಗಿ ಭಯ ಭಕ್ತಿಯಿಂದ ಹಾಗೂ ದಿವಾನ್ ಖಂಡೇರಾಯನ ಒಂದು ಹೇಳಿಕೆಯಿಂದ ವಾಸ್ತವ್ಯಕ್ಕಾಗಿ ಸ್ಥಳವನ್ನು ಸನ್ನದಾಗಿ ಹಾಕಿಕೊಟ್ಟನು. ಹೀಗೆ ಸವಣೂರು ಪುಣ್ಯ ಭೂಮಿಯಾಗಿ ಶ್ರೀಗಳವರ ಸನ್ನಿಧಿಯಾಗಿತ್ತು ಇದೇ ಸನ್ನಿಧಿಯಲ್ಲಿ ಜಗನ್ನಾಥ ದಾಸರು ದೊಡ್ಡ ಗ್ರಂಥವಾದ ಹರಿಕಥಾಮೃತಸಾರದ ಕೊನೆಯ ಒಂಭತ್ತು ಸಂಧಿಗಳನ್ನು ರಚಿಸಿದ್ದು ಹಾಗೂ ಶ್ರೀಗಳವರ ಮೇಲೆ ಅನೇಕ ಪದಗಳನ್ನೂ, ಸಂಸ್ಕೃತದಲ್ಲಿ ಶ್ರೀಗಳ ಸೋತ್ರವನ್ನು ಹಾಗೂ ಮಂಗಲಾಷ್ಟಕಗಳನ್ನು ರಚಿಸಿದ್ದಾರೆ. ಇವರಂತೆ ಕದರಮಂಡಲಗಿ ಹನುಮಯ್ಯ ದಾಸರು, ಮೋಹನ ವಿಠಲರು, ವ್ಯಾಸ ವಿಠಲರು, ಇವರ ಮೇಲೆ ಅನೇಕ ಪದಗಳನ್ನು ರಚಿಸಿದ್ದಾರೆ. ಇಂದಿಗೂ ನಾವು ಸತ್ಯಬೋಧರ ಪಾದುಕಗಳನ್ನು ಜಗನ್ನಾಥದಾಸರ ವಾಸ್ತವ್ಯವಾದ ಮಾನ್ವಿಯಲ್ಲೂ, ಜಗನ್ನಾಥದಾಸರ ಮಂತ್ರಾಕ್ಷತೆ ತಟ್ಟೆಯನ್ನೂ ಸವಣೂರ ಸತ್ಯಬೋಧ ತೀರ್ಥರ ಸನ್ನಿಧಿಯಲ್ಲೂ ಕಾಣುತ್ತೇವೆ. ಈಗಲೂ ಭಕ್ತ ವೃಂದಕ್ಕೆ ಶ್ರೀಗಳವರ ಮಂತ್ರಾಕ್ಷತೆ ಫಲವನ್ನು ಈ ತಟ್ಟೆಯಿಂದಲೇ ವಿತರಿಸಲಾಗುತ್ತದೆ. ಈ ರೀತಿ ಶ್ರೀಗಳು ಹರಿದಾಸ ಸಾಹಿತ್ಯಕ್ಕೆ ತಮ್ಮ ಬಲವನ್ನು ತುಂಬಿದ್ದಾರೆ

ಇಡೀ ಭಾರತದ ಇತಿಹಾಸದಲ್ಲಿ ಅನೇಕ ರಾಜರು ತಮ್ಮ ಲಾಂಛನದ ನಾಣ್ಯಗಳನ್ನು ಚಲಾವಣೆಗೆ ತಂದಿದ್ದನ್ನು ಕಾಣುತ್ತೇವೆ. ಆದರೆ ಒಬ್ಬ ಮುಸಲ್ಮಾನ ಮಹಾರಾಜ ಶ್ರೀಗಳವರ ಪಾಂಡಿತ್ಯ ಜಾಣ್ಮೆಗಳಿಗೆ ಮಾರು ಹೋಗಿ ಶ್ರೀ ಸತ್ಯಬೋಧ ಶ್ರೀಗಳ ಚಿತ್ರವಿರುವ ನಾಣ್ಯಗಳನ್ನು ಚಲಾವಣೆಗೆ ತಂದಿದ್ದು ವಿಶೇಷವೆನ್ನಬೇಕು. ಆ ನಾಣ್ಯಗಳು ಇಂದಿಗೂ-ಶ್ರೀಗಳವರ ಸನ್ನಿಧಿಯಲ್ಲಿ ಪ್ರತೀಕವಾಗಿ ಕೆಲವೊಂದು ಉಳಿದಿವೆ.

ಸತ್ಯಬೋಧ ತೀರ್ಥರು ಹಾಗೂ ಹೊಸರಿತ್ತಿಯಲ್ಲಿ ವಾಸಸ್ಥರಾದ ಧೀರೇಂದ್ರತೀರ್ಥ ಯತಿಗಳು ಸಮಕಾಲೀನರೆಂದು ತಿಳಿದು ಬರುತ್ತದೆ. ಇವರಿಬ್ಬರೂ ಮಹಾನ್ ಯತಿಗಳು. ಸತ್ಯ ಬೋಧ ತೀರ್ಥರು ಧೀರೇಂದ್ರ ತೀರ್ಥಯತಿಗಳು ಆಗಾಗ ಕೂಡಿ ಇದ್ದು ತತ್ತ್ವ ವಿಚಾರ ಮಾಡುತ್ತಿದ್ದರು. ಇದರ ಮೇಲಿಂದ ಸತ್ಯಬೋಧ ತೀರ್ಥರಲ್ಲಿ ಮತೀಯ ಹಾಗೂ ಮತೀಯ ಭೇದವಿಲ್ಲವೆಂಬುದು ಎದ್ದು ಕಾಣುತ್ತದೆ. ಇವರು ತತ್ತ್ವವಿಚಾರ ಮಾಡಿ ನಮ್ಮ ಭಾರತದ ಹಿಂದೂ ಸಮಾಜದಲ್ಲಿ ಅಶಾಂತಿ, ಮತ[...] ಭೇದ ಗಲಭೆಗಳು ಆಗದಂತೆ ನೋಡಿಕೊ[...]ತ್ತಿದ್ದರು.

ಇವರು ಬಯಸಿದಂತೆ ಕಾಶಿಯ[...] ಭಾಗೀರಥಿಯೇ ಇವರ ಸನ್ನಿಧಿಗೆ ಒ[...] ಅತ್ತಿ ಮರದ ಮೂಲಕ ಪ್ರವೇಶಿಸಿ ಅಲ್ಲೇ[...] ಉದ್ಭವಿಸಿ ಅದೇ ವಿಷ್ಣುತೀರ್ಥ ವ[...] ಇಂದಿಗೂ ಪಾಪ ತೊಳೆಯುವ ತೀರ್ಥವ[...] ಇವರ ತಪೋಪ್ರಾಬಲ್ಯವನ್ನು ಪ್ರ[...]ಗೊಳಿಸಿದೆ.

ಹೀಗೆ ಬರಬರುತ್ತ ಶ್ರೀಗಳವ[...] ನಿರ್ಯಾಣ ಕಾಲವು ಸಮೀಪಿಸಲು ತ[...] ಉತ್ತರಾಧಿಕಾರಿಯಾಗಿ ಹಾವೇರಿಯ [...] ರಾಮಾಚಾರ್ಯರನ್ನು ನೇಮಿಸಿದ[...] ಮುಂದೆ ಅವರಿಗೆ ಪಟ್ಟಾಭಿಷೇಕ ಮಾಡಿ[...] ಸತ್ಯಸಂಧತೀರ್ಥರು ಎಂದು ನಾಮಕರ[...] ಮಾಡಿದರು. ಸತ್ಯಬೋಧತೀರ್ಥರು [...] ವರ್ಷ ದೀರ್ಘ ಸನ್ಯಾಸಾಶ್ರಮ ಕೈಗೊಂ[...] ಉತ್ತರಾಧಿಮಠದ ಪರಂಪರೆಯಲ್ಲಿ ದಾಖ[...] ಸ್ಥಾಪಿಸಿದ್ದಾರೆ. ಹೀಗೆ ಧರ್ಮ ಪ್ರಚಾ[...] ಮಾಡುತ್ತಾ ಧರ್ಮರಾಜ ಯಜ್ಞ ಮಾಡಿ[...] ಸವಣೂರಿನ ಸ್ಥಳವನ್ನು ಕ್ರಿ. ಶ. 17[...] ನೇಯ ಫಾಲ್ಗುಣ ವದ್ಯ ಪ್ರತಿಪದೆಯಂ[...] ವೃಂದಾವನ ಪ್ರವೇಶಿಸಿದರು.

ಇವರು ಮಾರ್ಕಾಂಡೇಯನ ಅಂಶಜ[...] ಎನ್ನಲಾಗಿದೆ. ಆದ್ದರಿಂದ ಚಿರಂಜೀವಿ ಪಟ್ಟ[...]ವನ್ನು ಧರಿಸಿದ್ದಾರೆ. ಸತ್ಯಬೋಧ ತೀರ್ಥ[...] ವೃಂದಾವನಸ್ಥರಾಗಿ ಇಂದಿಗೆ 204 ವರ್ಷಗ[...] ಗತಿಸಿದವು. ಮಹಾಮಹಿಮ ಸತ್ಯಬೋ[...] ತೀರ್ಥರು ಕೋಟ್ಯಾನುಕೋಟಿ ಭಕ್ತ[...]ರಿಗೆ ತಮ್ಮ ಸನ್ನಿಧಿಯಲ್ಲಿ ಅನುಗ್ರಹಿಸುತ್ತಾ[...] ಪಾಪದೋಷಗಳನ್ನು ನಿವಾರಣೆ ಮಾಡುತ್ತ[...] ಇದ್ದಾರೆ. ಇಂಥಹ ಮಹಾಮಹಿಮರ ಆರಾಧನೆ ಪ್ರತಿ ವರ್ಷ ಫಾಲ್ಗುಣ ಮಾಸದ[...] ವಿಜೃಂಭಣೆಯಿಂದ ಮೂರುದಿನ ಆಚರಿಸಲ್ಪಡುತ್ತದೆ. ಇಂಥಹ ಮಹಾನುಭಾವರ ಪುಣ್ಯ[...] ಚರಿತ್ರೆಯ ಪರಿಚಯ ಹಾಗೂ ಸೇ[...] ನಮ್ಮೆಲ್ಲ ಭಕ್ತವೃಂದಕ್ಕೆ ಅತ್ಯವಶ್ಯಕವಾಗಿ[...] ಹಾಗೂ ದಾರಿದೀಪವಾಗಿದೆ.



## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು. —ತಿ. ತಿ. ದೇ.

# ಕವಿಗಳು ಕಂಡ ಆಂಜನೇಯ

ವಾಲ್ಮೀಕಿ ಯಿಂದ ಹಿಡಿದು ಕುವೆಂಪುವರೆಗೆ ವಿವಿಧ ಭಾರತೀಯ ಭಾಷೆಗಳಲ್ಲಿ ಅನೇಕ ಕವಿಗಳು ರಾಮಾಯಣಗಳನ್ನು ಬರೆದಿದ್ದಾರೆ. ರಾಮಾಯಣ ಬರೆದವರೆಲ್ಲರೂ ಮಾರುತಿಯ ಬಗ್ಗೆ ಬರೆಯಲೇ ಬೇಕು. ಏಕೆಂದರೆ ಶ್ರೀರಾಮಚಂದ್ರನ ನಂತರ ಎರಡನೆಯ ಮಹೋನ್ನತ ಪಾತ್ರವೇ ಆಂಜನೇಯ. ರಾಮಾಯಣ ಮಹಾಮಾಲಾ ರತ್ನಂ ವನ್ದೇ ಅನಿಲಾತ್ಮಜಂ–ಎಂದು ಆ ಮಹಾನುಭಾವನನ್ನು ಕೊಂಡಾಡಿದ್ದಾರೆ. ಭಾರತದೇಶದಲ್ಲಿ ಆಂಜನೇಯನ ಗುಡಿ ಇಲ್ಲದ ಊರಿಲ್ಲ–ಆತನನ್ನು ಕೊಂಡಾಡದ ಕವಿ ಇಲ್ಲ. ಮುಖ್ಯಪ್ರಾಣ ದೇವರಾದ ಮಾರುತಿ, ಸಮಸ್ತ ಸದ್ಗುಣಗಳಗಣಿ–ತಪಶ್ಶಕ್ತಿಯ ಮೂರ್ತಿಮಾನ್ ಸ್ವರೂಪ, ಯೋಗ ಸಿದ್ಧಿಯ ಮಹೋನ್ನತ ಪ್ರತೀಕ. ಭಾರತೀಯರಿಗಂತೂ ಪ್ರಾತಃ ಸ್ಮರಣೀಯ, ನಿತ್ಯಪೂಜ್ಯ–ವಂದನೀಯ ದೇವತೆ. ಆತನ ಸ್ಮರಣೆ ಮಾಡಿದರೆ ಸಾಕು ಬುದ್ಧಿ–ಬಲ-ಯಶಸ್ಸು–ಧೈರ್ಯ-ಸಾಹಸ-ಆರೋಗ್ಯ ನಿರ್ಭಯತ್ವ–ನಿರೋಗತ್ತ್ವ, ವಾಕ್‌ಪಟುತ್ವ...... ಎಲ್ಲವೂ ಲಭ್ಯವಾಗುತ್ತವೆ. ಆತನು ಹೊರನೋಟಕ್ಕೆ ಸುಂದರ ವ್ಯಕ್ತಿಯಲ್ಲದಿರಬಹುದು. ಆದರೆ ತನ್ನ ಸದ್ಗುಣ ಸಂಪತ್ತಿನಿಂದ ಕೋಟಿ ಕೋಟಿ ಭಾರತೀಯರ ಹೃನ್ಮಂದಿರದಲ್ಲಿ ಪ್ರತಿಷ್ಠಿತವಾಗಿರುವ–ಕಾಂಚನಾದ್ರಿ ಕಮನೀಯ ವಿಗ್ರಹ.

ಮಾರುತಿಯ ತಪಸ್ಸಿಗೆ ಮೆಚ್ಚಿ ಸಕಲ ದೇವತೆಗಳೂ ಅಮೂಲ್ಯ ವರಗಳನ್ನು ಅನುಗ್ರಹಿಸಿದ್ದಾರೆ ದಿಕ್‌ಪಾಲಕ ಸಾರ್ವಭೌಮನಾದ ಮಹೇಂದ್ರ–ನನ್ನ ವಜ್ರಾಯುಧವೂ ನಿನ್ನ ಪರಾಕ್ರಮದ ಮುಂದೆ ವ್ಯರ್ಥವಾಗುತ್ತದೆಂದು – ಅನುಗ್ರಹಿಸಿದ. ದೇವರಾಜ ಹೇಳಿದನಂತೆ–

ಅಹಮಸ್ಯ ಪ್ರದಾಸ್ಯಾಮಿ
ಪರಮಂ ವರಮದ್ಭುತಂ
ಇತಃ ಪ್ರಭೃತಿ ವಜ್ರಸ್ಯ
ಮಮ ಅವಧ್ಯೋಭವಿಷ್ಯತಿ

ಜಗಚ್ಚಕ್ಷುವಾದ ಭಗವಾನ್ ಭಾಸ್ಕರ, ತನ್ನ ಬಳಿ ವಿದ್ಯಾಭ್ಯಾಸ ಮಾಡಿದ ಮಾರುತಿಗೆ ಕೊಟ್ಟ ವರವೇನು!–

ತೇಜಸೋ ಅಸ್ಯ ಮದೀಯಸ್ಯ
ದದಾಮಿ ಶತಿಕಾಂ ಕಲಾಂ
ಯದಾಚ ಶಾಸ್ತ್ರಾಣ್ಯಧ್ಯೇತುಂ
ಶಕ್ತಿ ರಸ್ಯ ಭವಿಷ್ಯತಿ
ನ ಚಾಸ್ಯ ಭವಿತಾ ಕಶ್ಚಿತ್
ಸದೃಶಃ ಶಾಸ್ತ್ರ ದರ್ಶನೇ

ನನ್ನ ತೇಜಸ್ಸಿನಲ್ಲಿ ನೂರನೇ ಒಂದುಭಾಗ ಮಾರುತಿಗೆ ಅನುಗ್ರಹಿಸುತ್ತೇನೆ–ಇದರಿಂದ ಶಾಸ್ತ್ರಾರ್ಥ್ಯಯನ ಸಾಮರ್ಥ್ಯದಲ್ಲಿ ಈತನ ಸರಿಸಮರಾದವರು ಯಾರೂ ಇರಲಾರರು.

ಜಲಾಭಿಮಾನಿ ದೇವತೆಯಾದ ದಿಕ್‌ಪಾಲಕ ವರುಣ ತನ್ನ ಅಮೂಲ್ಯ ವರದಿಂದ ಆಂಜನೇಯನನ್ನಲಂಕರಿಸಿದ್ದಾನೆ–

ನ ಅಸ್ಯ ಮೃತ್ಯು ರ್ಭವಿಷ್ಯತಿ
ವರ್ಷಾಯುತ ಶತೇನಾಪಿ
ಮತ್ ಪಾಶಾದುದ ಕಾದಪಿ

ಕೋಟಿ ಕೋಟಿ ವರ್ಷಗಳೇ ಸರಿದು ಹೋಗಲಿ–ವರುಣ ಪಾಶದಿಂದಲೇ ಆಗಲಿ–ನೀರಿನಿಂದಲೇ ಆಗಲಿ ಮಾರುತಿಗೆ ಸಾವಿಲ್ಲ!!

ಸಕಲ ಜೀವ ಕೋಟಿಗಳ ದಂಡಾಧಿಕಾರಿ ಯಮಧರ್ಮರಾಯ ಮಾರುತಿಗೆ ಕೊಟ್ಟ ವರವೇನು!–ಸುಪ್ರತಿಷ್ಠಿತ ಆರೋಗ್ಯ – ಯಾವುದೇ ಭೀಕರ ರಣರಂಗದಲ್ಲಾಗಲೀ ವಿಷಾದ ರಹಿತ ಸಾಹಸ–ಎಲ್ಲಕ್ಕಿಂತ ಮಿಗಿಲಾಗಿ–ಯಮನ ಗದಾ ದಂಡದಿಂದಲೂ ಅಪಾಯವಿಲ್ಲವಂತೆ – ಆಂಜನೇ–ಯನಿಗೆ

ಯಮದಂಡಾ ದವಧ್ಯತ್ವಂ
ಅರೋಗತ್ವಂ ಚ ದತ್ತವಾನ್
ಅವಿಷಾದಂ ಚ ಸಂಯುಗೇ
ಗದೇಯಂ ಮಾಮಿಕಾ ನೈನಂ
ಸಂಯುಗೇಷು ವಧಿಷ್ಯತಿ

ವಿಶ್ವಕರ್ಮ ಅನುಗ್ರಹಿಸಿದ್ದೇನು!–

ಮತ್ ಕೃತಾನಿ ಚ ಶಸ್ತ್ರಾಣಿ
ಯಾನಿ ದಿವ್ಯಾನಿ ತಾನಿ ಚ
ತೈಃ ಅವಧ್ಯತ್ವ ಮಾಪನ್ನಃ
ಚಿರಜೀವೀ ಭವಿಷ್ಯತಿ

ಯಾವ ಆಯುಧವೂ ಮಾರುತಿಯನ್ನೇನೂ ಮಾಡಲಾರದಾದ್ದರಿಂದ ಈತ ಚಿರಂಜೀವಿಯಾಗಿರಲಿ!!

ಚತುರ್ಮುಖನಾದ ಬ್ರಹ್ಮದೇವ ಸುಮ್ಮನಿರುತ್ತಾನೆಯೆ? ಮಾರುತಿಗೆ ಆತನೂ ವರ ನೀಡಿದ್ದಾನೆ – ಮತ್ ಸದೃಶ ದೀರ್ಘಾಯುರ್ಭವ!! ನನ್ನಂತೆ ದೀರ್ಘಾಯುವಾಗಿರು–ಎಂದ. ಕೋಟಿ ಕೋಟಿ ಜೀವಿಗಳ ಹಣೆಯ ಬರಹ ಬರೆಯುವ ಬ್ರಹ್ಮದೇವ!!

ಇಷ್ಟೆಲ್ಲ ಸಾಲದೆಂಬಂತೆ ಲೋಕಪಾಲಕನಾದ ವಾಯುದೇವ ತನ್ನ ಪುತ್ರನಾದಾಂಜನೇಯನಿಗೆ ಪರಮಾನುಗ್ರಹ ಮಾಡುತ್ತ ಹೇಳಿದನಂತೆ–

ಅಮಿತ್ರಾಣಾಂ ಭಯಕರೋ
ಮಿತ್ರಾಣಾಮಭಯಂಕರಃ
ಕಾಮರೂಪಃ ಕಾಮಚಾರೀ
ಕಾಮಗಃ ಪ್ಲವತಾಂ ವರಃ
ಭವತ್ಯವ್ಯಾಹತ ಗತಿಃ
ಕೀರ್ತಿ ಮಾಂಶ್ಚ ಭವಿಷ್ಯತಿ

ಶತ್ರುಗಳಿಗೆ ಭಯಂಕರನೂ–ಭಕ್ತವೃಂದಕ್ಕೆ ಅಭಯಂಕರನೂ ಆಗಿ, ಬೇಕಾದ ರೂಪಧರಿಸುವ–ಬೇಕಾದ ಕಡೆ ಅಪ್ರತಿಹತ ಗತಿಯಿಂದ ಸಂಚರಿಸುವ ಶಕ್ತಿ ಪಡೆದು–ಕೀರ್ತಿ ಶಾಲಿಯಾಗಿರಲಿ!!

ಆದ್ದರಿಂದಲೇ ಕವಿವರ್ಯವಾಲ್ಮೀಕಿ ಹೇಳಿದ್ದು–
ಪರಾಕ್ರಮ ಉತ್ಸಾಹ ಮತಿ
ಪ್ರತಾಪ ಸೌಶೀಲ ಸೌಜನ್ಯ



ಶ್ರೀ ಗುಂಡೂರಾವ್

ಮಾಧುರ್ಯ ನಯಾನ ಯೈಶ್ಚ
ಗಾಂಭೀರ್ಯ ಚಾತುರ್ಯ ಸುವೀರ್ಯಧೈರ್ಯೈಃ
ಹನೂಮತಾ ಕೋಽಪ್ಯಧಿಕೋಽಸ್ತಿ ಲೋಕೇ?
ನಹ್ಯಸ್ಯ ಕಶ್ಚಿತ್ ಸದೃಶೋಽಸ್ತಿ
ಶಾಸ್ತ್ರೇ ವೈಶಾರದೇ ಧುಂದಗತೌ ತಥೈವ

ಆದಿಕವಿ ವಿರಚಿತ ಶ್ರೀಮದ್ರಾಮಾಯಣದಲ್ಲಿ–ಕಿಷ್ಕಿಂಧಾಕಾಂಡದ ದ್ವಿತೀಯ ಸರ್ಗದಲ್ಲಿ ಮಾರುತಿಯ ಪ್ರಸ್ತಾಪ ಮೊಟ್ಟ ಮೊದಲು ಬರುತ್ತದೆ–ಪಂಪಾ ಸರಸ್ತೀರದಲ್ಲಿ ಆತ ರಾಮಲಕ್ಷ್ಮಣರನ್ನು ದರ್ಶಿಸುವ ಸನ್ನಿವೇಶದಲ್ಲಿ ಮಾರುತಿಯ ವಚೋವೈಖರಿಗೆ – ವಾಗ್ವಿದಗ್ಧತೆಗೆ –ಪ್ರಭುರಾಮ ರಾಮಚಂದ್ರ ಬೆರಗಾಗಿ ಹೋದ. ಆಗ ಆತನ ಬಾಯಿಂದ ಬರುವ ಪ್ರಶಂಸಾತ್ಮಕ ಮಾಣಿಕ್ಯ ಮಾಲೆಯಿಂದ ಮಾರುತಿ ಸುಶೋಭಿತನಾಗಿದ್ದಾನೆಂಬುದು ನಿರ್ವಿವಾದ.

ಜ್ಞಾನಿನಾಂ ಅಗ್ರಗಣ್ಯಂ, ಬುದ್ಧಿಮತಾಂ ವರಿಷ್ಠಂ–ಎಂದೆಲ್ಲ ಹಿರಿಮೆಗಳಿಸಿರುವ ಮಾರುತಿ ತನ್ನ ಮಾತಿನಿಂದ ಶ್ರೀರಾಮನನ್ನು ಎಷ್ಟು ಆನಂದ ಪಡಿಸಿದನೆಂದರೆ, ಸ್ವಯಂ ಪ್ರಭುರಾಮಚಂದ್ರನೇ ಹೇಳುತ್ತಾನೆ – ಉಚ್ಚಾರಯತಿ ಕಲ್ಯಾಣೀಂ ವಾಚಂ ಹೃದಯ ಹಾರಿಣೀಂ–ಮಾತಿನ ಮೂಲಕ ಹೃದಯವನ್ನೇ ಅಪಹರಿಸಿದನಂತೆ. ಚತುರ್ವೇದ ಪಾರಂಗತನಾಗದವನು ಹೀಗೆ ಮಾತಾಡಲು ಸಾಧ್ಯವೇ–ಎಂದು ರಾಮಚಂದ್ರ ಪ್ರಭು ಬೆರಗಾಗಿ ನುಡಿದ.

ಯಜಮಾನನಾದ ಸುಗ್ರೀವನಿಗಿಂತಲೂ ಆಪ್ತ ಸಚಿವನಾದ ಆಂಜನೇಯನ ಬಗ್ಗೆ ಮಾತಾಡುವಾಗ ಹತ್ತು ಬಾಯಾಗುತ್ತದೆ–

ನ ಭೂಮೌ ನಾಂತರಿಕ್ಷೇ ವಾ
ನಾಂಬರೇ ನಾಮರಾಲಯೇ
ನಾಪ್ಸು ವಾ ಗತಿ ಸಂಗತೇ
ಪಶ್ಯಾಮಿ ಹರಿ ಪುಂಗವ
ಸಾಸುರಾಃ ಸಹಗಂಧರ್ವಾಃ
ಸ ನಾಗ ನರ ದೇವತಾಃ
ವಿದಿತಾ ಸರ್ವಲೋಕಾಸ್ತೇ
ಸ ಸಾಗರ ಧರಾ ಧರಾಃ

ಎಂದು ಸುಗ್ರೀವ ಕೊಂಡಾಡಿದ್ದು ಸಂಪೂರ್ಣ ಸತ್ಯವೇ ಹೊರತು ಮುಖಸ್ತುತಿ ಖಂಡಿತ ಅಲ್ಲ.

ಸಾಗರಾನ್ ಶೋಷಯಿಷ್ಯಾಮಿ
ದಾರಯಿಷ್ಯಾಮಿ ಮೇದಿನೀಂ
ಪರ್ವತಾನ್ ಚೂರ್ಣಯಿಷ್ಯಾಮಿ
ವಿಧಮಿಷ್ಯಾಮಿ ಜೀಮೂತಾನ್
ಸ ತದ್ಪ್ಲುತಂ ಪ್ರಪಶ್ಯಾಮಿ
ಯಸ್ಮಾಂಪ್ಲುತ ಮನುವ್ರಜೇತ್

ಎಂದು ಗರ್ಜಿಸಿ ನಿಂತ ಆ ವೀರಾಗ್ರಣಿಯ ಬೃಹದ್ಭಾರಕ್ಕೆ ಅಚಲವಾದ ಮಹೇಂದ್ರ ಪರ್ವತ ನಡುಗಿಹೋಯ್ತು – ಸ ಚಚಾಲ ಅಚಲಶ್ಚಾಪಿ ಮುಹೂರ್ತಂ ಕಪಿ ಪೀಡಿತಃ!!

ತೇಜಸ್ಸು, ಧೃತಿ, ಯಶಸ್ಸು, ಕಾರ್ಯದಕ್ಷತೆ, ಸಾಮರ್ಥ್ಯ–ನಯವಿನಯ ಪೌರುಷ–ವಿಕ್ರಮ–ಪ್ರಖರ ಮೇಧಾಶಕ್ತಿಗಳಿಗೆ ಮಾರುತಿ ತವರು ಮನೆಯಾಗಿದ್ದ. ಹನುಮಂತ ಮಾಡಿದ ಕಾರ್ಯಗಳನ್ನು ಊಹಿಸಿ ಕೊಳ್ಳುವುದು ಕಷ್ಟ. ಆ ಗುರುತರ ಕಾರ್ಯವೆಲ್ಲ ಆತನಿಗೆ ಲೀಲಾಜಾಲ. ಕಾರಣ ವೇಷ–ಆತನ ಯೋಗಸಿದ್ಧಿ ಮತ್ತು ಪ್ರಭುಕೃಪೆ. ಇಷ್ಟೆಲ್ಲಾ ಯೋಗ್ಯತೆ ಇದ್ದರೂ–ದಾಸೋಹಂ ಕೊಸಲೇಂದ್ರಸ್ಯ–ಎಂಬ ಭಕ್ತಿವಿನಮ್ರತೆ ಮಾರುತಿಯ ವ್ಯಕ್ತಿತ್ವ ಕ್ಕಿಟ್ಟ ಸುರಮ್ಯ ಪ್ರಭಾವಳಿ.

ಹಿಂದಿ ಭಾಷೆಯ ಮ ಹಾ ಕ ವಿ ಯಾ ದ ಗೋಸ್ವಾಮಿ ತುಳಸೀದಾಸ ಮಾರುತಿಯ ಅನುಗ್ರಹದಿಂದಲೇ–ಮಾನಸಗ್ರಂಥ ಬರೆದದ್ದು–ರಾಮನ ದರ್ಶನ ಪಡೆದದ್ದು. ಸಂತ ಕವಿ ತುಲಸೀದಾಸ ಮಾರುತಾತ್ಮಜನ ಬಗ್ಗೆ ತನ್ನ ಗ್ರಂಥಗಳಲ್ಲಿ ಬಳಸಿರುವ ಗೌರವ ಪೂರ್ಣ ವಾಕ್ಯಗಳನ್ನು–ವಿಶೇಷಣಗಳನ್ನು ಸಂಗ್ರಹಿಸಿದರೆ ಅದೇ ಒಂದು ಕಿರು ಹೊತ್ತಗೆಯಾದೀತು. ಮಾದರಿಗಾಗಿ ಕೆಲವು ಮಾತುಗಳನ್ನು ಉದಹರಿಸುವುದು ಅಪ್ರಾಸಂಗಿಕವಾಗಲಾರದು–

ಮೋಹತಮ ತರಣಿ–ಕುಂದೇಂದು ಕರ್ಪೂರ
ವಿಗ್ರಹರುಚಿರ–ತರಣತಾರಣಕರ್ತ–ಅತುಲ
ಬಲ ವಿಪುಲವಿಸ್ತಾರ ವಿಗ್ರಹ – ಸುಲಭಂ
ಅತಿದುರ್ಲಭಂ ಬುದ್ಧಿ ವಾರಿಧಿ – ಭವಿಷ್ಯದ್ವಿ
ಧಾತ–ರಜನಿಚರ ನಗರ ಉತ್ಪಾತ ಕೇತು
ವೇದ ವೇದಾಂತ ವಿದ್ಬ್ರಹ್ಮಚಾರಿ–ಸಾಮ
ಗಾಥಾಗ್ರಣೀ–ಕಾಮಜೇತಾಗ್ರಣೀ–ಜಾತ
ರೂಪಾ ಚಲಾಕಾರ ವಿಗ್ರಹ-ನವವ್ಯಾಕರಣ
ಕಾವ್ಯ ಕೌತುಕಕಲಾ ಕೋಟಿ ಸಿಂಧು
ಬ್ರಹ್ಮಲೋಕಾದಿ ವೈಭವ ವಿರಾಗಿ–ವಚನ
ಮಾನಸಕರ್ಮ–ಸತ್ಯಧರ್ಮವ್ರತಿ–ರಾಮ ಹಿತ
ರಾಮಭಕ್ತಾನುವರ್ತಿ–ಸುಪುಣ್ಯ ಪುಂಜ–
ರಾ ಮಾ ಯ ಣ ಶ್ರ ವ ಣ ಸಂ ಜಾ ತ
ರೋಮಾಂಚಲೋಚನಸಜಲ ಶಿಥಿಲ
ಗಾತ್ರ–ರಾಮ ಪದಪದ್ಮ ಮಕರಂದ ಮಧು
ಕರ–ದಾಸತುಲಸೀದಾಸ ಪ್ರಾಣದಾತ....

ತುಲಸೀದಾಸರ ತಪಃಪೂತವಾಣಿಯ ಈ ಒಂದೊಂದು ಮಾತೂ ಭಾವ ಗಾಂಭೀರ್ಯದ ಗಣಿಗಳಂತಿವೆ. ಕಾಶಿಯಲ್ಲಿರುವ ಸಂಕಟಮೋಚನ ಹನುಮಾನ್–ತುಲಸೀದಾಸರ ಆರಾಧ್ಯದೇವ ಆತನ ಸಂಕಟಗಳೆಲ್ಲ ಪರಿಹರಿಸಿದ ಕೃಪಾ ಹಿಂದಿಯ ಈ ಕವಿವರ್ಯ, ಮಾರುತಿಯನ್ನು ಕು ಸ್ತೋತ್ರ ಮಾಡಿರುವುದು, ಆ ಭಾಷಾಸಾಹಿತ್ ಲೋಕೋತ್ತರ ಭಾಗವಾಗಿದೆಯೆಂದರೆ ತಪ್ಪಲ್ಲ.

ಕ್ರಿ.ಶ. ಸುಮಾರು 1500 ರಲಿದ್ದನೆಂದು ಹೆ ಲಾಗುವ ಕನ್ನಡದ ಕವಿ ತೊರವೆಯ ನರಹ ಈತನ ಲಲಿತ ಸುಂದರ ಭಾಮಿನೀಷಟ್ಪದಿ ಕಾ ತೊರವೆಯ ರಾಮಾಯಣ–ಕನ್ನಡ ಸಾಹಿತ್ಯ ರಸಮಾಧುರ್ಯಕ್ಕೆ ಹೆಸರಾಂತ ಕಾವ್ಯ. ಮಾರುತಿಯನ್ನು ತನ್ನ ಕಾವ್ಯದಲ್ಲಿ ಹೇಗೆ ಕ ದ್ದಾನೆ? ಕಾವ್ಯದ ಪ್ರಾರಂಭದಲ್ಲೇ ಆಂಜನೇ ನನ್ನು ಸ್ತೋತ್ರಮಾಡುವ ವೈಖರಿ ಹೀಗಿದೆ–

ಉದಧಿ ಲಂಘನ ಜನಕಜಾ ಸ
ನ್ಮುದ ವಿವರ್ಧನ ವೈರಿಭಟಗಜ
ವಿದಳನೋದ್ಧತಸಿಂಹ ಲಂಕಾನಗರ ನಿರ್ದಹ
ಕದನ ಕರ್ಕಶಭೀಮ ರಿಪುದಶ
ವದನ ದರ್ಪವಿರಾಮ ರಾಘವ
ಪದ ಸರೋಜ ಭ್ರಮರ ಭುವನ ಪ್ರಾಣಜ
ವ

ತನ್ನ ಯಜಮಾನನಾದ ಸುಗ್ರೀವನಿಂದ ಆಜ ಪಿತನಾಗಿ ಆಂಜನೇಯ ಪಂಪಾ ಸರೋವರದ ಶ್ರೀರಾಮಚಂದ್ರನನ್ನ ಸಂದರ್ಶಿಸಲು ಬಂದಿದ್ದಾ ಅದು ಅವರಿಬ್ಬರ ಪ್ರಪ್ರಥಮ ಬೇಟಿ ಇಲ್ಲಿ ವಾಣಿ ಹೀಗಿದೆ–

ಸುಗ್ರೀವನನು ಬೀಳ್ಕೊಂಡು ಪಿನಾಕಧರ
ವಿಶ್ರಾ
ನವ ಸುವ್ಯಾಕರಣ ಕೋವಿದನು ಶೇಷಶ್ರುತಿ
ಕಲಾವಿದ
ಲೋಕ ಲೋಚನ ಭೀಕರನು ಜಗದೇಕ
ವೀರನುದಾ
ಗುಣಸಂಪನ್ನ ರತ್ನಾಕರನು ರಾಘವನ ಕಾ
ಉತ್ಸವದಿ ನಡೆತಂ
ಥಳಥಳಿಸಿತಿನಬಿಂಬ ನಾಭೀ
ವಲಯದಲಿ ನಭದಮಲ ತಾರಕೆ
ತೊಳಗಿದವು ಶುದಿಮಸ್ತಕದ ಉತ್ಥಾನ
ಪಾದಜನ ನಿಳಯದಲಿ
ಲಾಂಗೂಲ ಲಂಬಿಸಿ ಕೊಳಗಿಳಿ ದಿಗ್ವಳಯ
ಬಂಧ
ಹೊಲಿಗೆ ಹರಿಯಲು ಹನುಮ ಮೈಬೋರಿದ
ರಘುಪ

ಸಾಗರೊಲ್ಲಂಘನಕ್ಕುವಾದ ಆಂಜನೇಯ–

ಸರಾಗದಲಿ ಗುಣನಿಧಿಯು ರಘುವಂಶ
ಚೂಡಾಮಣಿಯು
ರಾಕ್ಷಸ ಕುಲತಮೋ ದಿನಮಣಿಯು ನೆನೆದು
ಅಡಿ ಇಟ್ಟನುರು ವಿಕ್ರಾಂತ ಹನುಮಂತ

ಸಾಗರವನುತ್ತರಿಸಿದ ಭವಸಾಗರೋತ್ತಾರಕನು, ಕರುಣಾಸಾಗರನ ಸಗರಾನ್ವಯನ ಕರುಣದಲಿ- ಲಂಕೆಯಲ್ಲಿ ಸೀತಾಮಾತೆಯದರ್ಶನ ಭಾಗ್ಯ ಪಡೆದನಂತೆ !!

ಸಾಕೇತನಗರದಲ್ಲಿ ಶ್ರೀರಾಮಚಂದ್ರನ ಪಟ್ಟಾಭಿಷೇಕದ ಸಂಭ್ರಮಸಡಗರ. ರತ್ನಮಯ ಸಿಂಹಪೀಠದಲ್ಲಿ ಸೀತಾದ್ವಿತೀಯನಾಗಿ ಪ್ರಭು ವಿರಾಜಮಾನನಾಗಿದ್ದಾನೆ. ಮಂಗಳವಾದ್ಯಗಳು ಭೋರ್ಗರೆಯುತ್ತಿವೆ. ವಂದಿಸಂದೋಹ ರಘುಕುಲದ ಬಿರುದು ಬಾವಲಿಗಳನ್ನು ಹಾಡಿ ಹೊಗಳುತ್ತಿದೆ. ವಿಭೀಷಣ-ಸುಗ್ರೀವ ಸಿಂಹಾಸನದ ಎಡ ಬಲಭಾಗಗಳಲ್ಲಿ ಚಾಮರ ಬೀಸುತ್ತ ನಿಂತಿದ್ದಾರೆ. ಕನಕಲಂಕಾಧೀಶ್ವರನಾದರೇನು ? ಕಿಷ್ಕಿಂಧಾಧಿಪತಿಯಾದರೇನು ? ಭುವನೈಕ ಪೂಜ್ಯನಾದ ರಘೂದ್ವಹನ ಸನ್ನಿಧಿಯಲ್ಲಿ ಸೇವಕರಷ್ಟೆ !! ವಸಿಷ್ಠ–ವಾಮದೇವಾದಿ ಪೂಜ್ಯರು ಶಾಸ್ತ್ರೋಕ್ತ ವಿಧಿವಿಧಾನಗಳಿಂದ ಪಟ್ಟಾಭಿಷೇಕ ನೆರವೇರಿಸಿದ್ದಾರೆ. ಆ ತುಂಬಿದ ಸಭೆಯಲ್ಲಿ ಪ್ರಭು ರಾಮಚಂದ್ರ ಎಲ್ಲರಿಗೂ ಸೂಕ್ತ ಉಡುಗೊರೆಗಳನ್ನಿತ್ತು ಸತ್ಕರಿಸಿದ್ದಾನೆ. ಆದರೆ ಪಾದಪೀಠದ ಬಳಿ ಕುಳಿತಿದ್ದ ಪವಮಾನಸುತನಿಗೇನೂ ಕೊಡಲಿಲ್ಲ – ಯಾವ ಆಭರಣವನ್ನೂ – ಯಾವ ಚೀನಾಂಬರಗಳನ್ನೂ ಕೊಡಲಿಲ್ಲ. ಸೀತಾಮಾತೆ ಇದನ್ನು ಗಮನಿಸಿ ಸೂಚ್ಯವಾಗಿ ರಾಮನ ಕಡೆ ನೋಡುತ್ತಾಳೆ. ಇಂಗಿತಜ್ಞನಾದ ಶ್ರೀರಾಮಚಂದ್ರ ಮಾರುತಿಯ ತಲೆಯಮೇಲೆ ತನ್ನ ಹಸ್ತವನ್ನಿಟ್ಟು–ವರದ ಹಸ್ತವನ್ನಿಟ್ಟು ಗಂಭೀರವಾಗಿ ಹರಸುತ್ತಾನೆ–

ಆ ವಿರಿಂಚಿಯ ವೈಭವವು ನಿನಗೆ
ಕಲ್ಪಾವಸಾನಕೆ ಸಲಲಿ।
ಭುವನ ಜನಾವಳಿಗಳುರೆ ವಂದಿಸಲಿ–
ಸ್ತುತಿಸಲಿ ನಿನ್ನ।
ಗುರುವಾಗು ಜಗಕೆ ॥

ಇದಕ್ಕಿಂತಲೂ ದೊಡ್ಡ ಉಡುಗೊರೆ ಬಹುಶಃ ಯಾವುದೂ ಇರಲಾರದು !!

ಅಷ್ಟಸಿದ್ಧಿಗಳನ್ನು ಇಷ್ಟಕಿಂಕರರಂತೆ ಮಾಡಿಕೊಂಡಿದ್ದ ಪೂಜ್ಯಪಾವನಿಗೆ ಸಾಯುಜ್ಯಕ್ಕಿಂತಲೂ ಪ್ರಭುಸಾಮೀಪ್ಯವೇ ಪ್ರಿಯವಾಗಿ ಕಂಡಿರಬೇಕು. ಆತ ರಾಮಚಂದ್ರನನ್ನು ಕೇಳಿದ್ದೇನು ?

ಸ್ನೇಹೋ ಮೇ ಪರಮೋ ರಾಜನ್
ತ್ವಯಿ ತಿಷ್ಠತು ನಿತ್ಯದಾ
ಭಾವೋ ನಾನ್ಯತ್ರ ಗಚ್ಛತು।

ಇದು ಮುಮುಕ್ಷು ಜೀವಿಗಳೆಲ್ಲರ ಮನೋಭಿಲಾಷೆಯ ಪ್ರತೀಕದಂತಿರುವ ಮಾತು.

ಯಾವತ್ಕಥಾ ಪ್ರಚರಿಷ್ಯಂತಿ
ಯಾವಲ್ಲೋಕೇ ಹರೀಶ್ವರ
ತಾವದ್ರಮಸ್ವ ಸುಪ್ರೀತೋ
ಮದ್ವಾಕ್ಯಮನುಪಾಲಯನ್

ಎಂದು ಹರಸಿದ ರಘುರಾಮಚಂದ್ರನ ಕೃಪೆ–ಮಾರುತಿಯ ಅರ್ಹತೆ ಎರಡೂ ಚೆನ್ನ.

ಮಾರುತಿ – ನೀನು ಮಾಡಿದ ಒಂದೊಂದು ಉಪಕಾರಕ್ಕು ನಾನು ಒಂದೊಂದು ಪ್ರಾಣವನ್ನೇ ಕೊಟ್ಟೇನು. ಆದರೂ ನಾನೇ ಋಣಿಯಾಗಿರುತ್ತೇನೆ, ಬಾಕಿದಾರನಾಗಿರುತ್ತೇನೆ. ನಾನು ವಿಪತ್ತಿನಲ್ಲಿದ್ದಾಗ ನೀನು ನೆರವು ನೀಡಿದ್ದಿ. ಉಪಕಾರವನ್ನಪೇಕ್ಷಿಸುವುದು ವಿಪತ್ತಿನಲ್ಲಿದ್ದಾಗ ಅಲ್ಲವೇ ? ನನ್ನ ಉಪಕಾರದ ಆಗತ್ಯ ನಿನಗೆ ಬೀಳುವುದೇ ಬೇಡ– ಅಂದರೆ ನಿನಗೆ ಯಾವ ವಿಧವಾದ ವಿಪತ್ತೂ–ಯಾವ ಕಾಲದಲ್ಲೂ–ಬರುವುದೇ ಬೇಡ– ಎಂದು ಗದ್ಗದ ಕಂಠನಾಗಿ ಹೇಳಿದ ಶ್ರೀ ರಾಮಚಂದ್ರ. ಇದು ಪರಮಾನುಗ್ರಹವಲ್ಲದೆ ಮತ್ತೇನು ?

ಯಾರ ಚರಣಾರವಿಂದಗಳನ್ನು ಪೂಜಿಸಿ ಪರಮ ಪದವಿಯನ್ನು ಪಡೆಯಬಹುದೊ–ಅಂತಹ ಪರಮಪುರುಷ–ಶ್ರೀರಾಮಚಂದ್ರನೇ–ಬಹು ಪ್ರೀತಿಯಿಂದ ಮಾರುತಿಯನ್ನು ಆಲಂಗಿಸಿಕೊಂಡನೆಂದರೆ– ಆಂಜನೇಯನಿಗಿಂತಲೂ ಭಾಗ್ಯವಂತರು ಬೇರೆ ಯಾರುಂಟು ?

ಆಂಜನೇಯ ಜಗತ್ತಿಗೆ ಬೋಧಿಸುವುದೇನು ? ಕೀರ್ತಿಶೇಷ ಡಿ. ವಿ. ಜಿ. ಯವರ ಮಾತಿನಲ್ಲಿ ಕೇಳಿರಿ–

ಘನತತ್ತ್ವವೊಂದಕ್ಕೆ ದಿನರಾತ್ರಿ ಮನಸೋತು
ನೆನೆಯದಿನ್ನೊಂದ–ಎಲ್ಲವ ನೀಡುತದರ
ಅನುಸಂಧಾನದಲಿ
ಜೀವ ಭಾರವನು ಮರೆಯುವುದು
ಹನುಮಂತನುಪದೇಶ – ಮಂಕುತಿಮ್ಮ ॥

ಯುಕ್ತಿಯುಕ್ತವಾದ, ಸಂದರ್ಭೋಚಿತವಾದ–ಸುಸಂಸ್ಕೃತವಾದ – ನ್ಯಾಯಸಮ್ಮತವಾದ, ಧರ್ಮಸಮ್ಮತವಾದ, ಮಾತು ಹನುಮಂತನಲ್ಲಿ ಮನೆ ಮಾಡಿತ್ತು. ಆದ್ದರಿಂದಲೇ ಆದಿಕವಿ ಆತನನ್ನು "ವಾಕ್ಯಜ್ಞೋ ವಾಕ್ಯಕೋವಿದಃ" – ಎಂದಿರುವುದು.

ನ ರಾವಣ ಸಹಸ್ರಂ ಮೇ ಯುದ್ಧೇ ಪ್ರತಿಬಲಂ ಭವೇತ್– ಸಹಸ್ರಜನ ರಾವಣರಾದರೂ ಯುದ್ಧದಲ್ಲಿ ನನ್ನ ಪ್ರತಿಕಕ್ಷಿಗಳಾಗಿ ನಿಲ್ಲಲಾರರು– ಎಂದು ರಾವಣನೆದುರಿಗೇ ಅವನ ಆಸ್ಥಾನದಲ್ಲೇ ಗರ್ಜಿಸುವ ವೀರಜೀವಿ ಹನುಮಂತ, ಸೀತಾದೇವಿಯ ಹತ್ತಿರ ಮಾತಾಡುವಾಗ ಅಷ್ಟೇ ಮೃದು ಮಧುರ ವಚನಕೋವಿದನಂತೆ ಕಾಣುತ್ತಾನೆ. ಸುಗ್ರೀವನ ವಿಪುಲ ಸೈನ್ಯದಲ್ಲಿ ನನಗಿಂತಲೂ ಪರಾಕ್ರಮದಲ್ಲಿ ಮಿಗಿಲಾದವರು ಅನೇಕಮಂದಿಯುಂಟು. ಆದರೆ ನನಗಿಂತಲೂ ಅಲ್ಪರಾರೂ ಇಲ್ಲ. ನಾನೇ ಎಲ್ಲರಿಗಿಂತಲೂ ಚಿಕ್ಕವನು– ಎನ್ನುವಾಗ ಆ ಭೀಮ ವಿಕ್ರಮಿಯ ವಿನಯ ಗಾಂಭೀರ್ಯಗಳ ದರ್ಶನವಾಗುತ್ತದೆ. ದೈವಭಕ್ತಿ–ಧರ್ಮಾನುರಾಗ, ವಿನಯ – ಕರ್ತವ್ಯನಿಷ್ಠೆ – ಈ ನಾಲ್ಕು ಅಂಶಗಳು ಮಾರುತಿಯಲ್ಲಿ ಪ್ರಧಾನವಾಗಿ ಕಾಣುವ ಮಹೋನ್ನತ ಗುಣಗಳು. ಅಭಿಜ್ಞಾಭರಣವಾಗಿ ರಾಮನ ಉಂಗುರವನ್ನು ಕೋಟಿ ಕೋಟಿ ವಾನರಸೈನ್ಯದ ಮಧ್ಯೆ ಪಡೆದಾಗ ಆಂಜನೇಯನ ಆನಂದ ಎಷ್ಟಿರಬೇಕೆಂದು ಯಾವ ಕವಿಯೂ ವಿಶದವಾಗಿ ಬಣ್ಣಿಸಲಾರ. ಆದಿ ಕವಿಯ ಹೃದಯ ಈ ಸನ್ನಿವೇಶದಲ್ಲಿ ಪರಮಾನಂದ ಭರಿತವಾಗಿ ಬರೆದಿದೆ–

ಕೃತಾರ್ಥ ಇವ ಸಂಹೃಷ್ಟಃ
ಪ್ರಹೃಷ್ಟೇಂದ್ರಿಯಮಾನಸಃ
ಸ ತದ್ಗೃಹ್ಯ ಹರಿಶ್ರೇಷ್ಠಃ
ಕೃತ್ವಾ ಮೂರ್ಧ್ನಿ ಕೃತಾಂಜಲಿಃ
ವಂದಿತ್ವಾ ಚರಣೌ ಚೈವ
ಪ್ರಸ್ಥಿತಃ ಪ್ಲವಗರ್ಷಭಃ ॥

ಈ ಚಿತ್ರವನ್ನು ಕಲ್ಪಿಸಿಕೊಂಡು ನಾವು ಧನ್ಯರಾಗಬೇಕು !!

ಭಾರತೀಯ ಸಾಹಿತ್ಯದಲ್ಲಿ ಮಹೋನ್ನತ ಪಾತ್ರವಾಗಿ ಮೆರೆಯುವ ಮಾರುತಿ ಕವಿಗಳಿಗೆ ಸ್ಫೂರ್ತಿದಾಯಕನೂ ಹೌದು–ಭಜಕರಿಗೆ ಮುಕ್ತಿದಾಯಕನೂ ಹೌದು.

"ನಮಾಮಿ ತಂ ಪ್ರಾಂಜಲಿಕಾಂಜನೇಯಮ್"



# ತಿರುಪ್ಪಾವೈ

ಮಾಯನ್ನೈ ಮನ್ನುವಡ ಮದುರೈ ಮೈಂದನ್ನೈ
ತ್ತೂಯ ಪೆರುನೀರ್ ಯಮುನ್ನೈತ್ತುರೈವನ್ನೈ
ಆಯರ್ ಕುಲತ್ತಿನಿಲ್ ತೋನ್ರುಂ ಮಣಿವಿಳಕ್ಕೈ
ತಾಯ್ಯೈ ಕುಡಲ್ ವಿಳಕ್ಕಮ್ ಶೈಯ್ದ ದಾಮೋದರನ್ನೈ
ತೂಯೋಮಾಯ್ ವಂದು ನಾಂ ತೂಮಲರ್
ತೂವಿತ್ತೊಳುತು
ವಾಯಿನಾಲ್ ಪಾಡಿ ಮನತ್ತಿನಾಲ್ ಶಿಂದಿಕ್ಕ
ಪೋಯಪಿಳೈಯುಮ್ ಪುಗದರುವಾ ನಿನ್ರನವುಮ್
ತೀಯಿನಿಲ್ ತೂಶಾಗುಮ್ ಶೆಪ್ಪೇಲೋರೆಂಬಾವಾಯ್

ಮಾಯುಗಾರನಾತನನ್ನು ಬಡಗು ಮಧುರೆಯಾಣ್ಮನನ್ನು
ತೋಯು ತುಂಬಿ ಹರಿವ ಯಮುನೆ ನದಿಯ
ದಡದ ವಾಸಿಯನ
ಆ ಯದುವಿನ ಕುಲದಲೆಸೆವ ಮಂಗಳ ಮಣಿ ದೀಪನನ್ನು
ತಾಯ ಗರ್ಭವನ್ನು ಬೆಳಗಿದಂಥ ದಾಮ ಉದರನನ್ನು
ಕಾಯ ಮನದೆ ಶುದ್ಧರಾಗಿ ಶ್ರೇಷ್ಠ ಪುಷ್ಪದಿಂದ ಭಜಿಸಿ
ಬಾಯ ಬಿಟ್ಟು ಹಾಡಿನಲಿದು ಮನದಿತುಂಬಿಕೊಂಡು ನೆನೆ
ಹೇಯವಾದ ಪಾಪರಾಶಿ ಬೆಂಕಿಯಲ್ಲಿ ಬಿದ್ದ ಹತ್ತಿ
ಬೇಯುವಂತೆ ನಾಶ ಹೊಂದೆ ಅವನ ನೆನೆದು ನೋಂಪಿಗೈವ



ಪುಳ್ಳುಂ ಶಿಲಂಬಿನಕಾಣ್ ಪುಳ್ಳರೆಯಿನ್ ಕೋಯಿಲಿಲ್
ವೆಳ್ಳೈ ವಿಳಿಶಙ್ಗಿನ್ ಪೇರರವಮ್ ಕೇಟ್ಟಿಲೈಯೋ
ಪಿಳ್ಳಾಯ್ ಎಳುಂದಿರಾಯ್ ಪೇಯ್ ಮುಲೈನಂಜುಂಡು
ಕಳ್ಳಚ್ಚಗಡಮ್ ಕಳಕ್ಕಳಿಯಕ್ಕಾಲೋಚ್ಚಿ
ವೆಳತ್ತರವಿಲ್ ತುಯಿಲಮರಂದ ವಿತ್ತಿನೈ
ಉಳ್ಳತ್ತುಕ್ಕೊಂಡು ಮುನಿವರ್‌ಗಳುಂ ಯೋಗಿಗಳುಂ
ಮೆಳ್ಳಯೆಳುಂದು ಅರಿಯೆನ್ರ ಪೇರರವಮ್
ಉಳ್ಳಂ ಪುಗುಂದು ಕುಳಿರ್‌ಂದೆಲೋ ರೆಂಬಾವಾಯ್

ಗಿಳಿಯು ಹಾಡುತಿಹುದು ಕೇಳು, ಹಕ್ಕಿಯೇರಿದವನ ಗುಡಿಯ
ಬಿಳಿಯ ಶಂಖದಿಂದ ಮೂಡುತಿರುವ ಸದ್ದ ಕೇಳು ಬಾಲೆ
ತೀವ್ರಗೊಂಡು ಮೇಲಕೇಳು, ಅಸುರಿ ಮೊಲೆಯ ನಂಜನುಂಡು
ಕಳ್ಳ ಶಕಟನನ್ನು ಕೊಂದು ಹಾಲಿನಾ ಸಮುದ್ರದಲ್ಲಿ
ಕಾಲ ಚಾಚಿ ಹಾವ ಮೇಲೆ ಮಲಗಿದಂಥ ಪರಮನನ್ನು
ಒಳ್ಳೆ ಮನದಿ ಚಿಂತಿಸುತ್ತ ಯೋಗಿ ಮುನಿಜನಂಗಳೆಲ್ಲ
ಮೆಲ್ಲನೆದ್ದು ಹರಿಯ ನಾಮ ಜಪವ ಮಾಳ್ಪ ರವವು ಹರಿದು
ಒಳ ಹೃದಯದಿ ಮುದವನೀಯೆ ಅವನ ನೆನೆದು ನೋಂಪಿಗೈವ



# ಕರ್ನಾಟಕದಲ್ಲಿ

## ಡಿ.ವಿ.ಜಿ. ಜನ್ಮ ಶತಮಾನೋತ್ಸವ

ಕರ್ನಾಟಕದ ಎಲ್ಲ ನಗರಗಳಲ್ಲಿ ವಿಶೇಷವಾಗಿ ಕೋಲಾರ ಜಿಲ್ಲೆಯಲ್ಲಿ ಒಂದು ವರ್ಷಕಾಲ ಆಚರಿಸಬೇಕೆಂದು ಯೋಜಿಸಲಾಗಿರುವ ಡಿ.ವಿ.ಜಿ. ಅವರ ಜನ್ಮ ಶತಾಬ್ದಿ ಉತ್ಸವಗಳ ಉದ್ಘಾಟನೆ ಮಾರ್ಚ್ 17 ರಂದು ಮುಳಬಾಗಿಲಿನ ಡಿ.ವಿ.ಜಿ. ಜನ್ಮ ಶತಾಬ್ದಿ ರಂಗಮಂಟಪದಲ್ಲಿ ಅತ್ಯಂತ ಸಡಗರ ಸಂಭ್ರಮಗಳಿಂದ ನಡೆಯಿತು.

ಡಿ. ವಿ. ಜಿ. ಶತಮಾನೋತ್ಸವ ಸಮಿತಿ ಕೋಲಾರಜಿಲ್ಲೆ ಹಾಗೂ ಕರ್ನಾಟಕ ರಾಜ್ಯ ಡಿ. ವಿ. ಜಿ. ಜನ್ಮ ಶತಮಾನೋತ್ಸವ ಸಮಿತಿಗಳ ಸಂಯುಕ್ತ ಆಶ್ರಯದಲ್ಲಿ ನಡೆದ ಈ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಶ್ರೀ ಇ. ಎಸ್. ವೆಂಕಟರಾಮಯ್ಯ ಅವರು ವಹಿಸಿದ್ದರು.

ಡಿ. ವಿ. ಜಿ. ರಂಗಮಂದಿರವನ್ನೂ ಉತ್ಸವವನ್ನೂ ಉದ್ಘಾಟಿಸಿದ, ಕರ್ನಾಟಕ ನ್ಯಾಯ ಶಾಖಾಮಂತ್ರಿ ಪ್ರೊ॥ ಎ. ಲಕ್ಷ್ಮೀಸಾಗರ್ ಅವರು ವಿದ್ಯಾರ್ಥಿ ಪರಿಷತ್‌ನ ಕೊಡುಗೆಯಾದ ಡಿ.ವಿ.ಜಿ. ಪ್ರತಿಮೆಯ ಅನಾವರಣ ಮಾಡಿ 'ಡಿ. ವಿ. ಜಿ. ಅವರ ಸಾರ್ವಜನಿಕ ಸೇವಾ ಉತ್ಸುಕತೆ, ಸಾತ್ತ್ವಿಕ ವಿಚಾರ ಪ್ರಣಾಲಿಗಳನ್ನು ನಾವೂ ಹೊಂದಿ ನಡೆಯುವಂತೆ ಆಗಲಿ' ಎಂದು ಹಾರೈಸಿದರು.

ಪುಸ್ತಕ ಪ್ರದರ್ಶನವನ್ನು ಉದ್ಘಾಟಿಸಿದ ಖ್ಯಾತ ಕವಿ ಶ್ರೀ ಸಿದ್ಧಯ್ಯ ಪುರಾಣಿಕರು ಡಿ. ವಿ. ಜಿ. ಅವರನ್ನು ಅರಿಸ್ಟಾಟಲನಿಗೆ ಹೋಲಿಸಿ ಮಾತ-ನಾಡಿದರು.

ಅಧ್ಯಕ್ಷತೆ ವಹಿಸಿದ್ದ ನ್ಯಾಯಮೂರ್ತಿ ಶ್ರೀ ಇ. ಎಸ್. ವೆಂಕಟರಾಮಯ್ಯ ಅವರು ಡಿ. ವಿ. ಜಿ. ಅವರ ಎಂಟು ಪುಸ್ತಕಗಳನ್ನು (ಸುಲಭ ಬೆಲೆಯ ಪುನಃಪ್ರಕಾಶನಗಳು) ಬಿಡುಗಡೆ ಮಾಡಿ 'ಹಕ್ಕಿನ ಮೇಲೆ ಬೆಳೆಯುವ ಸಮಾಜ ಉಳಿಯದೆಂದೂ ಧರ್ಮದ ಆಧಾರದಲ್ಲಿ ಸಮಾಜ ನಡೆಯಬೇಕೆಂದೂ' ಅದೇ ಡಿ. ವಿ. ಜಿ. ಅವರ ಸಂದೇಶವೆಂದೂ ನುಡಿದರು.

ಡಿ. ವಿ. ಜಿ. ಬಯಲು ರಂಗಮಂಟಪದ ನೆನಪಿನ ಸಂಚಿಕೆ 'ಚಿಗುರು' ಪುಸ್ತಕವನ್ನು ಬಿಡುಗಡೆ ಮಾಡಿದ ಕರ್ನಾಟಕ ರೇಷ್ಮೆ ಇಲಾಖಾಮಂತ್ರಿ ಶ್ರೀ ಕೆ. ಎಂ. ಕೃಷ್ಣಾರೆಡ್ಡಿ ಅವರು ಕರ್ನಾಟಕದ ಎಲ್ಲೆಡೆ ಡಿ. ವಿ. ಜಿ. ಅವರ ಸಾಹಿತ್ಯ ಪ್ರಸಾರವಾಗಿ ಬಾಳು ಹಸನಾಗಲಿ ಎಂದು ಹಾರೈಸಿದರು.

ರಂಗಮಂಟಪ ನಿರ್ಮಾಣ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಒತ್ತಾಸೆ ನೀಡುವುದೆಂದು ಆಶಿಸಿದ ಕೋಲಾರದ ಶಾಸಕ ಶ್ರೀ ಕೆ. ಆರ್. ಶ್ರೀನಿವಾಸಯ್ಯ ಅವರು ಇಲ್ಲಿ ಒಳ್ಳೆಯ ಗ್ರಂಥಾಲಯವೂ ಆಗಬೇಕು ಎಂದು ಸೂಚಿಸಿದರು. ಭಾಗವಾದ ಮೂಡಲ ಬಾಗಿಲಿನಲ್ಲಿ ಕ
ಎಲ್ಲ ಗ್ರಂಥಗಳೂ, ಇತರ ಭಾಷೆಗಳ
ಅತ್ಯುತ್ತಮ ಗ್ರಂಥಗಳೂ ದೊರಕುವಂತಾ
ನಿರ್ಮಾಣವಾಗುವ ಗ್ರಂಥಾಲಯ ಹಿ
ಬೆಳೆಯಬೇಕೆಂದು ಸ್ಥಳೀಯ ಶಾಸಕ ಆರ್. ವೆ
ರಾಮಯ್ಯನವರು ನುಡಿದರು.

ಡಿ. ವಿ. ಜಿ. ಅವರು ಸ್ಥಾಪಿಸಿದ ಬೆಂಗಳ
ಗೋಖಲೆ ಸಾರ್ವಜನಿಕ ಸಂಸ್ಥೆಯ ಗ
ಕಾರ್ಯದರ್ಶಿ ನಿವೃತ್ತ ನ್ಯಾಯಮೂರ್ತಿ
ನಿಟ್ಟೂರು ಶ್ರೀನಿವಾಸರಾಯರು ಮಾತನಾ
ಧರ್ಮ, ಸಾಹಿತ್ಯ, ಸಮಾಜಸೇವೆ,
ಕೋದ್ಯಮಗಳಲ್ಲಿ ಡಿ. ವಿ. ಜಿ. ಅವರು ನಾಡು
ಸಂಸ್ಕೃತಿಗಳಿಗೆ ಮಾಡಿದ ಸೇವೆಯನ್ನು
ಕೊಂಡು ಅಂತಹ ಮಹನೀಯರ ನೆನಪಿ
ಜೀವನ ಶಾಂತಿ ಉತ್ಕರ್ಷಗಳತ್ತ ನಡೆಯುವು
ಸಂದೇಹವಿಲ್ಲವೆಂದರು.

ಡಿ. ವಿ. ಜಿ. ಜನ್ಮ ಶತಾಬ್ದಿ ಸಮಿ
ಕಾರ್ಯಾಧ್ಯಕ್ಷ ಶ್ರೀ ಜಿ. ನಾರಾಯಣ ಅ
ಮಾತನಾಡುತ್ತ ಈ ವರ್ಷದಲ್ಲಿ ಡಿ. ವಿ. ಜಿ. ಅ
ಜೀವನ–ಸಾಹಿತ್ಯ ಸಾಧನೆಗಳನ್ನು ಹದಿನಾ
ಭಾಷೆಗಳಲ್ಲೂ ಹೊರತರುವ ಪ್ರಯತ್ನ
ನಡೆಯುವುದೆಂದೂ, ಡಿ. ವಿ. ಜಿ. ಅವರ ಸವ



ಎಡದಿಂದ ಬಲಕ್ಕೆ – ಸರ್ವಶ್ರೀ; (ಮಾತನಾಡುತ್ತ) ಶ್ರೀ ಕೆ. ಪ್ರಹ್ಲಾದರಾವ್, ಕೆ.ಆರ್. ಶ್ರೀನಿವಾಸಯ್ಯ, ಜಿ. ನಾರಾಯಣ, ನಿಟ್ಟೂರು ಶ್ರೀನಿವಾಸರಾವ್, ಡಿ. ತಂಗರಾಜ್, ಎ. ಲಕ್ಷ್ಮೀಸಾಗರ್, ನ್ಯಾಯಮೂರ್ತಿ ಇ.ಎಸ್. ವೆಂಕಟರಾಮಯ್ಯ, ಕೆ.ಎಂ. ಕೃಷ್ಣಾರೆಡ್ಡಿ, ಆರ್. ವೆಂಕಟರಾಮಯ್ಯ.

ಕೃತಿ, ಲೇಖನಗಳನ್ನು ಸಂಪುಟಗಳಾಗಿ ಹೊರತರಲಾಗುವುದೆಂದೂ, ಕರ್ನಾಟಕದ ಎಲ್ಲೆಡೆ, ಹಾಗೂ ಭಾರತದ ಪ್ರಮುಖ ನಗರಗಳಲ್ಲಿ ಶತಮಾನೋತ್ಸವವನ್ನು ಆಚರಿಸಲಾಗುವುದೆಂದೂ ಕಾರ್ಯಕ್ರಮ ವಿವರಣೆ ನೀಡಿದರು.

ಜಿಲ್ಲಾ ಸಮಿತಿಯ ಅಧ್ಯಕ್ಷ ಕೋಲಾರ ಜಿಲ್ಲಾಧಿಕಾರಿ ಶ್ರೀ ಡಿ. ತಂಗರಾಜ್ ಅವರು ಸ್ವಾಗತಿಸಿ ಮಾತನಾಡುತ್ತ ಜಿಲ್ಲೆಯ ಎಲ್ಲ ತಾಲ್ಲೂಕು ಕೇಂದ್ರಗಳಲ್ಲೂ ಡಿ. ವಿ. ಜಿ. ಸಾಹಿತ್ಯ ವಿಚಾರಸಂಕಿರಣಗಳೂ, ಪ್ರಚಾರೋಪನ್ಯಾಸಗಳೂ ನಡೆಯುವುವೆಂದು ವಿವರಿಸಿದರು. ಜಿಲ್ಲಾ ಸಮಿತಿ ಕಾರ್ಯದರ್ಶಿ ಶ್ರೀ ಕೆ.ಆರ್. ನರಸಿಂಹನ್ ನಿರ್ವಹಿಸಿದ ಸಭೆಯನ್ನು ಜಿಲ್ಲಾಸಮಿತಿ ಪ್ರಧಾನ ಕಾರ್ಯದರ್ಶಿ ಶ್ರೀ ಕೆ. ಪ್ರಹ್ಲಾದ ರಾವ್ ಅವರು ವಂದಿಸಿದರು.

ಅಂದು ಮಧ್ಯಾಹ್ನ ನಡೆದ ಡಿ. ವಿ. ಜಿ. ಜೀವನ-ಸಾಧನೆ ವಿಚಾರಸಂಕಿರಣವನ್ನು ಡಾ॥ ಹಾ. ಮಾ. ನಾ. ಅವರು ಅಧ್ಯಕ್ಷ ಪೀಠದಿಂದ ನಡೆಸಿಕೊಟ್ಟರು. ಪ್ರೊ॥ ಅ. ರಾ. ಮಿತ್ರ ಅವರು ನಿರ್ವಹಿಸಿದ ಸಭೆಯಲ್ಲಿ ಪ್ರೊ॥ ಎಂ. ವಿ. ಸೀತಾರಾಮಯ್ಯನವರು ಡಿ. ವಿ. ಜಿ. ಅವರ ವ್ಯಕ್ತಿತ್ವವನ್ನು ಕುರಿತು, ಡಾ॥ ಜಿ. ಎಸ್. ಶಿವರುದ್ರಪ್ಪನವರು ಡಿ. ವಿ. ಜಿ. ಸಾಹಿತ್ಯದ ಹಲವು ಮುಖಗಳನ್ನು ಕುರಿತು, ಪ್ರೊ॥ ಚಿ. ನ. ಮಂಗಳಾ ಅವರು ಡಿ. ವಿ. ಜಿ. ಅವರ ಮಂಕುತಿಮ್ಮನ ಕಗ್ಗವನ್ನು ಕುರಿತೂ ಮಾತನಾಡಿದರು.

ಅಂದು ಬೆಳಗ್ಗೆ ಉದ್ಘಾಟನೆಗೆ ಮೊದಲು ಮುಳಬಾಗಿಲಿನ ಪ್ರಮುಖ ಬೀದಿಗಳಲ್ಲಿ ಆನೆಯ ಮೇಲೆ ಡಿ. ವಿ ಜಿ ಅವರ ತೈಲಚಿತ್ರವನ್ನು ಅಲಂಕರಿಸಿ ತಾಳಮೇಳ, ಕೀಲುಬೊಂಬೆ, ಕೋಲಾಟ, ಕರಗ, ಜಾನಪದ ನೃತ್ಯಗಳೊಂದಿಗೆ ಅಂಕಿ ಸಂಖ್ಯಾಧಿಕಾರಿ ಶ್ರೀ ರಾಮರಾಯರ ನೇತೃತ್ವದಲ್ಲಿ ಮೆರವಣಿಗೆ ನಡೆಸಲಾಯಿತು. ಸಂಜೆ ದೇವರಮಳ್ಳೂರು ಕಲಾವಿದರಿಂದ ಕಳಶ ನೃತ್ಯವೂ, ಪ್ರಭಾತ ಕಲಾವಿದರಿಂದ ಡಿ. ವಿ. ಜಿ. ಅವರ ಶ್ರೀ ಚೆನ್ನಕೇಶವ ಅಂತಃಪುರ ಗೀತೆಗಳ ನೃತ್ಯ ರೂಪಕವೂ ನಡೆದವು. ಜಿಲ್ಲಾವಾರ್ತಾಪ್ರಚಾರಾಧಿಕಾರಿ ಶ್ರೀ ಕೆ. ಶಾಂತಪ್ಪ ಅವರ ನೇತೃತ್ವದಲ್ಲಿ ನಡೆದ ಪುಸ್ತಕ ಪ್ರದರ್ಶನದಲ್ಲಿ ಜಿಲ್ಲಾಲೇಖಕರ ಪುಸ್ತಕಗಳೂ, ಪತ್ರಿಕೆಗಳೂ, ಚಾಲುಕ್ಯ ಕಲಾವಿದರ ಚಿತ್ರಕಲೆ, ಫೋಟೋಗ್ರಾಫ್‌ಗಳೂ ಆಕರ್ಷಿದವು.

1887 ಮಾರ್ಚ್ 17 ರಂದು ಮುಳಬಾಗಿಲಿನಲ್ಲಿ ಹುಟ್ಟಿದ ಡಿ. ವಿ. ಗುಂಡಪ್ಪನವರು ಶಾಲಾ ಶಿಕ್ಷಣದಲ್ಲಿ ಅತಿ ಹೆಚ್ಚಿನದೇನನ್ನೂ ಸಾಧಿಸದೆಯೇ ಜೀವನರಂಗದಲ್ಲಿ ಧುಮುಕಿ ಪತ್ರಿಕೋದ್ಯೋಗಿಯಾಗಿ ಯಶಸ್ಸು ಗಳಿಸಿದರು. ಕರ್ನಾಟಕದ ಪ್ರಥಮ ಪತ್ರಕರ್ತರ ಸಮ್ಮೇಳನದ ಅಧ್ಯಕ್ಷರಾಗಿ ಕನ್ನಡನಾಡಿನ ಪತ್ರಿಕಾ ಪ್ರಪಂಚಕ್ಕೆ ಮಾರ್ಗದರ್ಶಕರಾದರು. ಕನ್ನಡ ಸಾಹಿತ್ಯ ಪರಿಷತ್ತಿನ ಏಳಿಗೆಯಲ್ಲೂ ಅವಿಶ್ರಾಂತವಾಗಿ ದುಡಿದವರು. ಗೋಖಲೆ ಸಾರ್ವಜನಿಕ ಸಂಸ್ಥೆಯನ್ನು ಸ್ಥಾಪಿಸಿ ಅದರ ಮೂಲಕ ನಾಗರಿಕ ಅಗತ್ಯಗಳ ವಿಶ್ಲೇಷಣೆ, ಸಮಾಜ ಸೇವೆ ಧಾರ್ಮಿಕ ವಿಚಾರ ಧಾರೆಗಳನ್ನು ಹರಡಿದ ಹಿರಿಯರು.



ಎಡದಿಂದ—ಪ್ರೊ॥ ಅ.ರಾ. ಮಿತ್ರ, ಡಾ॥ ಜಿ.ಎಸ್. ಶಿವರುದ್ರಪ್ಪ, ಮಾತನಾಡುತ್ತ ಪ್ರೊ॥ ಚಿ.ನ. ಮಂಗಳ ಡಾ॥ ಹಾ.ಮಾ. ನಾಯಕ್.

ಬದುಕಿನ ಎಲ್ಲ ಸಮಸ್ಯೆಗಳನ್ನೂ ಸಾತ್ತ್ವಿಕ ಚಿಂತನೆಯಿಂದ ಪರಿಹರಿಸಿ ಕೊಳ್ಳಬಹುದೆಂಬ ನಂಬಿಕೆ, ಅದಮ್ಯ ಜೀವನೋತ್ಸಾಹ ಅವರ ಸಾಹಿತ್ಯದ ಅಂತಃಸೂತ್ರಗಳು. ಅವರ ಲೇಖನಿಯಿಂದ ಹೊರಬಂದ ಮಂಕುತಿಮ್ಮನ ಕಗ್ಗ ಭಾರತೀಯ ತತ್ತ್ವಜ್ಞಾನದ ಆಧುನಿಕ ಕೈಪಿಡಿ, ಪುರುಷಸೂಕ್ತ, ಈಶೋಪನಿಷತ್ತು, ಗೀತ ಶಾಕುಂತಲ ಅವರ ಅನುವಾದ ಪ್ರೌಢಿಮೆಗೆ ಸಾಕ್ಷಿಗಳು. ಶ್ರೀಚೆನ್ನ ಕೇಶವ ಅಂತಃಪುರಗೀತೆಗಳು ಬೇಲೂರ ಶಿಲಾಬಾಲಿಕೆಯರಿಗೆತ್ತಿದ ಆರತಿಯ ಹಾಡು. ಜೀವನ ಧರ್ಮಯೋಗ ಭಗವದ್ಗೀತೆಯ ಬಹುಮೂಲ್ಯ ವ್ಯಾಖ್ಯಾನ. ಅವರ ಜ್ಞಾಪಕ ಚಿತ್ರಶಾಲೆಯ ವಿವಿಧ ಸಂಪುಟಗಳು ಒಂದು ಕಾಲಮಾನದ ಸಂಸ್ಕೃತಿಯ, ಇತಿಹಾಸದ ವ್ಯಕ್ತಿ ಮನೋಭಾವದ ಹಲವಾರು ತೈಲಚಿತ್ರಗಳು. ವನಸುಮ ಅವನ ಜೀವನ ದೃಷ್ಟಿ ಕೋನ.

ಮಡಿಕೇರಿಯಲ್ಲಿನ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠದಲ್ಲಿ ಕುಳ್ಳಿರಿಸಿದ್ದು, ಡಾಕ್ಟರೇಟ್ ಪ್ರಶಸ್ತಿ ಪ್ರದಾನ, ಪದ್ಮಭೂಷಣ ಪ್ರಶಸ್ತಿ, ಅವರ ಜೀವನ ಧರ್ಮಯೋಗಕ್ಕೆ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ ಇತ್ಯಾದಿಗಳು—ಅವರು ನಡೆದ ಹಾದಿಯಲ್ಲಿ ನಾಡು ಗುರುತಿಸಿದ ಘಟ್ಟಗಳಷ್ಟೆ.

ಇಂತಹ ಕವಿ, ಚಿಂತಕ, ಸಮಾಜಸೇವಕ, ಸಾತ್ತ್ವಿಕರ ಸಾಹಿತ್ಯ ಇನ್ನೂ ಜನಮನದಲ್ಲಿ ಸೇರಬೇಕಾಗಿದೆ. ಆ ದಿಸೆಯಲ್ಲಿ ಡಿ. ವಿ. ಜಿ ಜನ್ಮ ಶತಮಾನೋತ್ಸವ ಆಚರಣೆ ತನ್ನ ವಂತಿಗೆಯನ್ನು ಸಲ್ಲಿಸುವುದೆಂದು ನಂಬಲಾಗಿದೆ. ◆

ಚಿತ್ರಗಳು – 'ನಂದಿನಿ'



ಸಭಾಸದರು.

# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ:

ಶ್ರೀನಿವಾಸನ ಹಾಡುಗಳು-ಭಾಗ–2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4–50

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) –ವಿ. ಬಾದರಾಯಣ ಮೂರ್ತಿ 12–50

ಪುರಂದರೋಪನಿಷತ್ (ಪುರಂದರದಾಸರ ಏಳುಕೃತಿ ವಿವರಣೆ) –ಬನ್ನಂಜೆ ಗೋವಿಂದಾಚಾರ್ಯ 7–00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 3–75

ಕರ್ನಾಟಕ ಹರಿದಾಸರು(ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 2–25

ಗೀತಾಸಾರೋದ್ಧಾರ –ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 4–00

ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ 3–00

ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ 10–00

ಆಚಾರಗಳು ಆಡಂಬರಗಳು —ಕೆ. ಚಂದ್ರಮೌಳಿ 0–40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0–50

" " (ಕನ್ನಡ ಲಿಪಿಯಲ್ಲಿ) 0–12

### ಮಕ್ಕಳಿಗಾಗಿ:

ಶ್ರೀಪಾದರಾಜರು –ಎಂ. ಎಸ್. ಗುಂಡೂರಾವ್ 0–75

ಮಹಿಪತಿದಾಸರು –ಶಾನಭಾಗ 0–85

ಪ್ರಸನ್ನ ವೆಂಕಟದಾಸರು –ವಿ. ಬಾದರಾಯಣಮೂರ್ತಿ 0–80

ಗೋಪಾಲದಾಸರು –ರುಕ್ಮಿಣಿಗಿರಿಮಾಜಿ 0–75

### ಹಿಂದಿ:

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ –ಡಾ॥ ಎಂ. ಸಂಗಮೇಶಂ 0–2

ಶ್ರೀ ವೆಂಕಟೇಶ್ವರ ಸುಪ್ರಭಾತ್ (ಸಚಿತ್ರ) 11–0

ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ 1–5

### ಸಂಸ್ಕೃತ:

ಶ್ರೀ ವೇಂಕಟೇಶ್ವರ ಸುಪ್ರಭಾತಂ 0–1

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0–6

ಕಠೋಪನಿಷತ್ –ಡಾ॥ ಕೆ.ಸಿ. ವರದಾಚಾರಿ ಹಾಗೂ ಡಾ॥ ಡಿ. ತಾತಾಚಾರ್ಯ 15–0

ಮಾರ್ಕಂಡೇಯ ಸಂಹಿತಾ 18–0

ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ 2–0

ಬ್ರಹ್ಮಸೂತ್ರ ಭಾಷ್ಯ (ಭಾಗ–1) –ಆರ್. ರಾಮಮೂರ್ತಿ ಶರ್ಮಾ 30–00

ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್ 16–00

ಸೀತಾರಾಮಾಂಜನೇಯಂ –ಡಾ॥ ಡಿ. ಅರ್ಕಸೋಮಯಾಜಿ 50–00

ಪ್ರಶ್ನೋಪನಿಷತ್ 11–00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ ಸಂ–ಡಾ॥ ಎಸ್.ಬಿ. ರಘುನಾಥಾಚಾರ್ಯ 25–00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ:

**ಡೆಪ್ಯೂಟಿ ಎಕ್ಸಿಕ್ಯೂಟಿವ್ ಆಫೀಸರ್ (ಎಸ್)**
ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.

## ಗೃಹಲಕ್ಷ್ಮಿ

# ಜ್ಞಾನ ಸಂಪನ್ನೆ ಚೂಡಾಲಾ

ಮಂದರಾಚಲದ ಏಕಾಂತ ಪ್ರದೇಶವದು; ಅಲ್ಲಿ ಒಂದು ಪ್ರಶಾಂತ ಗುಹೆ. ಅದರ ಸುತ್ತ ಮುತ್ತಲೂ ಪುಷ್ಪೋದ್ಯಾನ. ಓರ್ವ ತಪಸ್ವಿಯು ದೇವ ಪೂಜೆಗಾಗಿ ಪುಷ್ಪಮಾಲೆಯೊಂದನ್ನು ನಿರ್ಮಿಸುತ್ತಿದ್ದ. ಆ ಸಮಯದಲ್ಲಿ ಅಲ್ಲಿಗೆ ಓರ್ವ ಗೌರವ ವರ್ಣದ ತೇಜೋಮೂರ್ತಿ ಬ್ರಾಹ್ಮಣನು ಬಂದನು. ಅವನನ್ನು ನೋಡಿದ ಕೂಡಲೆ ತಪಸ್ವಿಯು ಅರ್ಘ್ಯ ಪಾದ್ಯಗಳನ್ನು ನೀಡಿ, ಆಸನದಲ್ಲಿ ಕುಳ್ಳಿರಿಸಿದನು. ಬ್ರಾಹ್ಮಣನು ತನ್ನನ್ನು ತಾನು ಕುಂಭ ಋಷಿ ಎಂದು ಹೇಳಿಕೊಂಡನು. ಅವನು ಹೇಳಿದನು.

"ತಾವು ನನಗೆ ತುಂಬಾ ಸತ್ಕಾರ ಮಾಡಿದಿರಿ. ಸಂತೋಷವಾಯಿತು. ಆದರೆ ತಾವು ಇನ್ನೂ ತರುಣರು. ತಪಸ್ಸು, ಸನ್ಯಾಸಿಗಳಿಗೆ ಮತ್ತು ವಾನಪ್ರಸ್ಥಾಶ್ರಮದಲ್ಲಿರುವವರಿಗೆ ಮಾತ್ರ ಉಪಯುಕ್ತವಾದುದು. ಇವೆರಡರಲ್ಲೂ ಇಲ್ಲದ ತಾವು ತಪಸ್ಸನ್ನೇಕೆ ಮಾಡುತ್ತಿರುವಿರಿ?"

ಅಂದರೆ ?

"ಸುಖದುಃಖಗಳು ಮನಸ್ಸಿಗೆ ಉಂಟಾಗುವವುಗಳು, ಆತ್ಮಕ್ಕಲ್ಲ. ಇದಕ್ಕಾಗಿ ರಾಜ್ಯಕೋಶಗಳನ್ನು ತ್ಯಜಿಸಬೇಕಾದ ಅಗತ್ಯವೇನು? ಮೋಕ್ಷ ಬೇಕಾಗಿದ್ದರೆ ಆತ್ಮಜ್ಞಾನವನ್ನು ಪಡೆಯಿರಿ. ಮಿಥ್ಯೆಯಿಂದ ಕೂಡಿದ ಅಜ್ಞಾನಾವರಣವನ್ನು ದೂರ ಮಾಡಿ. ನಿಮ್ಮ ಪತ್ನಿ ಚೂಡಾಲಾಳು ನಿಮಗೆ ಸರಿಯಾದ ಉಪದೇಶವನ್ನೇ ಮಾಡಿದಳು. ಆದರೆ ನೀವು ಅದನ್ನು ನಿರ್ಲಕ್ಷಿಸಿ, ಈ ಅರಣ್ಯವನ್ನು ಪ್ರವೇಶಿಸಿದಿರಿ".

"ಹೌದು...ಅಲ್ಲ..."

ಹಾಗೆಂದರೆ...?

ತಪಸ್ವಿಯು ಮಾತನಾಡುವುದಿಲ್ಲ. ಬ್ರಾಹ್ಮಣನು ಮುಂದುವರಿಸುವನು – ತಾವು ಎಲ್ಲವನ್ನೂ ತ್ಯಾಗಮಾಡಲಿಲ್ಲವೇಕೆ?

ಇದನ್ನು ಆಲಿಸಿ ತಪಸ್ವಿಯು ಗಡಿಬಿಡಿಗೊಂಡು ಹೇಳಿದ,– ಏಕೆ? ಎಲ್ಲವನ್ನೂ ತ್ಯಜಿಸಿದ್ದೇನೆ–ಧನ, ರಾಜ್ಯ, ಮಕ್ಕಳು, ಸ್ತ್ರೀ ಸಮೂಹ ಎಲ್ಲವನ್ನೂ...

"ತಾತ್ವಿಕ ದೃಷ್ಟಿಯಿಂದ ಅವೆಲ್ಲವೂ ದೇವರಿಗೆ ಸೇರಿರುವುದು. ಅವುಗಳ ತ್ಯಾಗವು ತ್ಯಾಗವೇ ಅಲ್ಲ".

"ಈ ಅರಣ್ಯ, ಈ ಗುಹೆ, ಈ ಆಶ್ರಮ ಯಾವುದೂ ಬೇಡ.." ತಾನು ಕುಳಿತಿದ್ದ ಆಸನ, ಮೃಗಛಾಲಾ, ಕಮಂಡಲ ಇತ್ಯಾದಿಗಳನ್ನೆಲ್ಲ ತ್ಯಜಿಸಿ ಹೊರಬಂದ.

ತ್ಯಾಗಮಾಡುವುದು ಇನ್ನೂ ಬೇಕಾದಷ್ಟಿದೆ... ನಗುತ್ತಾ ಬ್ರಾಹ್ಮಣನು ಹೇಳಿದ

ನಾನು ನನ್ನ ಸಮಸ್ತ ತಪಸ್ಸು, ಜಪ ಪೂಜಾದಿಗಳ ಫಲವನ್ನು ತ್ಯಾಗ ಮಾಡುತ್ತೇನೆ...

ಇನ್ನೂ...

ತಪಸ್ವಿಯ ರೂಪದಲ್ಲಿನ ರಾಜನು ಹತ್ತಿರದ ಶಿಖರವನ್ನು ಏರಿದನು. ಅಲ್ಲಿಂದ ಧುಮುಕಬೇಕು ಎನ್ನುವಷ್ಟರಲ್ಲಿ ಬ್ರಾಹ್ಮಣನು ಹಿಂದುಗಡೆಯಿಂದ ಅವನನ್ನು ತಡೆದು ಕೇಳಿದನು:

"ನೀವು ಶರೀರವನ್ನು ತ್ಯಾಗ ಮಾಡುವುದರಿಂದ ಎಲ್ಲವೂ ಸುಗಮವಾಗುತ್ತದೆ ಎಂದುಕೊಂಡಿರೇನು? ಆತ್ಮಹತ್ಯೆಯು ಮಹಾಪಾಪಕರವಾದುದು. ನಾನು ನನ್ನದು, ನಾನು ಮಾಡಿದೆ, ನಾನು ತ್ಯಾಗ ಮಾಡಿದೆ– ಎಂಬ ದುರಹಂಕಾರವನ್ನು ತ್ಯಜಿಸಿ, ಇದನ್ನು ತ್ಯಜಿಸಿದಾಗಲೆ ನೀವು ಪೂರ್ಣರೂಪದ ತ್ಯಾಗಿಗಳಾಗುವಿರಿ..."

ತಪಸ್ವಿಯು ಈ ಮಾತುಗಳ ಬಗ್ಗೆಯೇ ಯೋಚಿಸತೊಡಗಿದ್ದ. ಯೋಚಿಸುತ್ತಾ ಹೋದಂತೆ ಮನಸ್ಸು ಶುದ್ಧರೂಪವನ್ನು ತಳೆಯಿತು. ಅಲ್ಲಿದ್ದ ಕಲ್ಮಷ, ಕೊಳಚೆಗಳು ತೊಳೆಯಲ್ಪಟ್ಟವು. ಈ ಬೋಧನೆಯಿಂದ ಅವನ ಒಳ–ಗಣ್ಣು ತೆರೆಯಿತು. ತನ್ನ ಅಜ್ಞಾನವನ್ನು ತೊಲಗಿಸಿದ ಜ್ಞಾನದಾತನಿಗೆ ನಮಸ್ಕರಿಸಬೇಕೆಂದು ಈ ಕಡೆ ತಿರುಗಿದ.

ಅರೆ, ಇದೇನಿದು ?

ಎಲ್ಲಿ ಆ ಬ್ರಾಹ್ಮಣ ?

ಅವನಿಲ್ಲ. ಅವನ ಜಾಗದಲ್ಲಿ ತನ್ನ ಪತ್ನಿ ಚೂಡಾಲಾಳು ಇರುವುದನ್ನು ಕಂಡು ತಪಸ್ವಿ ರೂಪದಲ್ಲಿನ ರಾಜಾ ಶಿಖಿಧ್ವಜನು ಕಂಡ.

'ರಘುಸುತ'



ಬ್ರಾಹ್ಮಣ ವೇಷದಲ್ಲಿದ್ದ ತನ್ನ ಪತ್ನಿ ಚೂಡಾಲಾಳನ್ನು ಕಂಡ ಕೂಡಲೆ ರಾಜಾ ಶಿಖಿಧ್ವಜನ ಮನಸ್ಸು ಪ್ರಶಾಂತಗೊಂಡಿತು.

ಶಿಖಿಧ್ವಜನು ಉಜ್ಜಯನಿಯ ಮಹಾರಾಜ. ಅವನು ಶೂರನೂ, ಸುಂದರನೂ, ಸದಾಚಾರಿಯೂ ಮತ್ತು ಪ್ರತಾಪಿಯೂ ಆಗಿದ್ದನು. ಇವನ ಪತ್ನಿಯೆ ಚೂಡಾಲಾ.

ಚೂಡಾಲಾಳು ಸೌರಾಷ್ಟ್ರದ ರಾಜಕನ್ಯೆ. ಅವಳು ಎಷ್ಟೊಂದು ಸುಂದರಳಾಗಿದ್ದಳೊ ಅಷ್ಟೇ ಸಂಗೀತ–ನೃತ್ಯ ಇತ್ಯಾದಿ ಲಲಿತ ಕಲೆಗಳಲ್ಲಿ ನಿಪುಣಳೂ ಆಗಿದ್ದಳು. ಉತ್ತಮ ಶೀಲ ಹಾಗೂ ಗುಣಗಳನ್ನು ಹೊಂದಿದ್ದಳು.

ಈ ದಂಪತಿಗಳು ತಮ್ಮಲ್ಲಿನ ಸದ್ಗುಣಗಳನ್ನು ಪರಸ್ಪರ ವಿನಿಮಯ ಮಾಡಿಕೊಂಡರು. ಇದರ ಫಲವಾಗಿ ಚೂಡಾಲಾಳು ಧರ್ಮಶಾಸ್ತ್ರ ಹಾಗೂ ನೀತಿ ಸಾರಗಳಲ್ಲಿ ಪ್ರವೀಣಳಾದಳು. ಅಂತೆಯೇ ಶಿಖಿಧ್ವಜನು ಲಲಿತ ಕಲೆಗಳಲ್ಲಿ ಪ್ರವೀಣನಾದನು.

ಚೂಡಾಲಾಳು ಧರ್ಮ ಜಿಜ್ಞಾಸೆಯಲ್ಲಿ ಪರಿಣತಳಾದಳು. ಧರ್ಮಶಾಸ್ತ್ರದಲ್ಲಿ ಉತ್ತಮ ಜ್ಞಾನ ಪಡೆದುದರಿಂದ ಅವಳಲ್ಲಿ ಮಂಥನವು ಪ್ರಾರಂಭವಾಯಿತು. ಅವಳ ಹೃದಯ ಭೂಮಿಯಲ್ಲಿ ಮನನ ಮಾಡುವಿಕೆಯ ಬೀಜೋತ್ಪನ್ನವಾಯಿತು. ಅವಳಲ್ಲಿ ಶುದ್ಧರೂಪದ ಸದಾಚಾರವು ಪ್ರಾದುರ್ಭಾವವಾಯಿತು. ಶರೀರ, ಇಂದ್ರಿಯಗಳು, ಮನಸ್ಸು, ಪ್ರಾಣ, ಬುದ್ಧಿ, ಅಹಂಗಳು–ತಮ್ಮ ನೈಜರೂಪಗಳನ್ನು ತ್ಯಜಿಸಿ, ಪವಿತ್ರ ರೂಪವನ್ನು ಪಡೆದುವು.

ಈರೀತಿಯಲ್ಲಿ ತಾನಾಗಿಯೇ ಪಾಡುಪಟ್ಟು, ಬಹಳಷ್ಟು ಸಾಧನೆ ಮಾಡಿ ಆತ್ಮಜ್ಞಾನವನ್ನು ಸಂಪಾದಿಸಿಕೊಂಡಳು. ಈ ರೀತಿಯಲ್ಲಿ ಪರಮ

ತತ್ತ್ವವನ್ನು ಸಾಧಿಸಿಕೊಂಡ ನಂತರ ತನ್ನ ಪತಿಯನ್ನು ಪರಿವರ್ತಿಸಲು ಪ್ರಯತ್ನಿಸಿದಳು.

ಮಹಾರಾಜ ಶಿಖಿಧ್ವಜನು ಇನ್ನೂ ಅರಿಷಡ್ವರ್ಗಗಳ ದಾಸನಾಗಿಯೇ ಇದ್ದ. ಸದ–ಸದ್ವಿವೇಕವನ್ನೂ ಪಡೆದಿರಲಿಲ್ಲ. ಸಂಸ್ಕಾರವಂತನಂತೂ ಆಗಿಯೇ ಇರಲಿಲ್ಲ. ಅವನನ್ನು ಉತ್ತಮ ದಾರಿಯಲ್ಲಿ ತರಲು ಪ್ರಯತ್ನಿಸಿ ಅವಳು ವಿಫಲಳಾದಳು. ಅವನಿಗಿನ್ನೂ ಅವಳ ದೇಹ ಸೌಂದರ್ಯದ ಬಗ್ಗೆಯೇ ಆಸೆಯಿತ್ತಾಗಿ, ಶೀಲ ಸೌಂದರ್ಯದ ಬಗ್ಗೆ ಮುಗ್ಧನಾಗಿದ್ದ.

ಕಾಲ ಉರುಳಿದಂತೆ ಪತ್ನಿ ಚೂಡಾಲಾಳು ದೈವಭಕ್ತಿ, ಪೂಜೆಗಳಲ್ಲಿ ನಿರತಳಾದುದರಿಂದ ಅವಳ ಸಹವಾಸವು ಕಡಿಮೆಯಾಯಿತು. ಧರ್ಮಯುಕ್ತ ಭೋಗವು ಪ್ರಾಪಂಚಿಕ ವೈರಾಗ್ಯದಲ್ಲಿ ಬದಲಾಯಿತು. ಇದು ವಿಚಾರ ಹೀನವೆಂಬುದು ಚೂಡಾಲಾಳ ಅಭಿಪ್ರಾಯ. ಇಂತಹ ವೈರಾಗ್ಯವು ಜನಿಸಿದ ಕೂಡಲೆ ಶಿಖಿಧ್ವಜನು ಅರಣ್ಯವನ್ನು ಪ್ರವೇಶಿಸಿ, ಕಾಯಕ್ಲೇಶ ಪ್ರಧಾನವಾದ ತಪಸ್ಸನ್ನು ಪ್ರಾರಂಭಿಸಿದನು. ಆದರೆ ಇದರಿಂದ ಯಾವುದೇ ಪ್ರಯೋಜನವಾಗುವುದಿಲ್ಲವೆಂಬುದು ಚೂಡಾಲಾಳ ನಂಬಿಕೆ.

ಇದಕ್ಕೆ ಕಾರಣವೇನೆಂದರೆ ವಾನಪ್ರಸ್ಥಾಶ್ರಮದಲ್ಲಿಯೆ ತಪಸ್ಸು ಮಾಡುವುದು ಯೋಗ್ಯ. ಯೌವ್ವನದಲ್ಲಿ ಪತ್ನಿ, ಸಂತಾನದಿಂದ ಕೂಡಿ, ಭಗವಂತನು ತನಗೆ ನಿಯಮಿಸಿರುವ ಕರ್ತವ್ಯಗಳ ನಿರ್ವಹಣ ಮಾಡುವುದು ಅವಶ್ಯಕ. ಅದಿಲ್ಲದೆ ಯೌವ್ವನದಲ್ಲಿ ಹೆಂಡತಿ ಮಕ್ಕಳನ್ನು ದೂರ ಮಾಡಿ, ತಪಸ್ಸು ಮಾಡುವುದು ವಿಧರ್ಮವಾಗುತ್ತದೆ.

ಅವನು ಕಾಡಿಗೆ ಹೋಗುವುದಕ್ಕೆ ಮುಂಚೆ "ಗೃಹಸ್ಥನಾಗಿದ್ದು ವನವಾಸ ಅಥವಾ ವಾನಪ್ರಸ್ಥಾಶ್ರಮವನ್ನು ಅನುಸರಿಸುವುದು ಧರ್ಮಕ್ಕೆ ವಿರುದ್ಧವಾದುದು" ಎಂದು ಗಂಡನನ್ನು ಸಮಾಧಾನ ಪಡಿಸಲು ಚೂಡಾಲಾಳು ಪ್ರಯತ್ನಿಸಿದಳು. ಆದರೆ ಅವನು ಅವಳ ಸಲಹೆಯನ್ನು ಸ್ವೀಕರಿಸಲಿಲ್ಲ, ಅವಳ ಮಾತು ಅವನಿಗೆ ಪಥ್ಯವಾಗಲಿಲ್ಲ.

ಪತ್ನಿಯು ತನ್ನ ದಾರಿಗೆ ಎಲ್ಲಿ ಅಡ್ಡಳಾಗಿ ಬರುವಳೊ ಎಂದು ರಾತ್ರೋರಾತ್ರಿ ಅರಮನೆಯನ್ನು ತ್ಯಜಿಸಿ, ಕಾಡನ್ನು ಸೇರಿದನು ಶಿಖಿಧ್ವಜ.

ತನ್ನ ಪತಿಯು ಎಲ್ಲಿರುವನೆಂಬುದನ್ನು ಕಂಡುಹಿಡಿಯುವುದು ಅವಳಿಗೆ ಕಷ್ಟಕರವಾದ ಕಾರ್ಯವಾಗಿರಲಿಲ್ಲ. ಸಮಯ ಬಂದಾಗ ತನ್ನ ಪತಿಯನ್ನು ಅನುಸರಿಸಿ, ಅವನನ್ನು ಸರಿಯಾದ ಮಾರ್ಗದಲ್ಲಿ ತರಲು ಆತ್ಮ ಸಾಧನೆಯನ್ನು ಪ್ರಾರಂಭಿಸಿ, ಆಕಾಶಮಾರ್ಗ ಗಮನದಲ್ಲಿಯೂ ಸಿದ್ಧಿಯನ್ನು ಪಡೆದಿದ್ದಳು.

ಆದರೆ ಪತಿಯನ್ನು ಈಗ್ಗೆ ಹಿಂಬಾಲಿಸಿ ಅವನನ್ನು ಹಿಂದಕ್ಕೆ ಕರೆದು ತರುವುದು ವ್ಯರ್ಥವೆಂದು ಭಾವಿಸಿ, ಸೂಕ್ತ ಸಮಯಕ್ಕಾಗಿ ಕಾಯುತ್ತಿದ್ದಳು. ಅವಳು ಆತ್ಮಸಾಧನೆಯಲ್ಲಿ ನಿರತಳಾಗಿದ್ದರೂ ತನ್ನ ಕರ್ತವ್ಯದಲ್ಲಿ ನಿರ್ಲಕ್ಷ್ಯಳಾಗಿರಲಿಲ್ಲ. ಗಂಡನು ಅರಣ್ಯಕ್ಕೆ ತೆರಳಿದ ಮೇಲೆ ರಾಜ್ಯಭಾರ ಕ್ರಮಗಳನ್ನೆಲ್ಲ ತಾನೇ ನಿರ್ವಹಿಸಿಕೊಂಡಿದ್ದಳು.

ಇದೇ ರೀತಿ ಹದಿನೆಂಟು ವರ್ಷಗಳು ಕಳೆದುವು.

ನಂತರ ಒಂದು ದಿನ ಬ್ರಾಹ್ಮಣನ ವೇಷದಲ್ಲಿ ಪತಿಯನ್ನು ಸಂಧಿಸಿ, ಅವನ ಹೃದಯದ ಕೋಳಿಯನ್ನು ದೂರಮಾಡಿದಳು. ಯಾರೇ ಆಗಲಿ ತನ್ನ ನಿಗದಿತ ಕರ್ತವ್ಯವನ್ನು ಮರೆಯಬಾರದು ಎಂದು ತಿಳಿಯ ಹೇಳಿದಳು. ತಪಸ್ಸು ಇತ್ಯಾದಿ ಸಾಧನೆಗಳನ್ನು ಕರ್ತವ್ಯವಿಮುಖರಾಗಿ ನಿರ್ವ–ಹಿಸುವುದನ್ನು ಪರೋಕ್ಷವಾಗಿ ಖಂಡಿಸಿದಳು. ಯಾವುದೇ ಸಾಧನೆಯಲ್ಲಿ ಗಂಡ, ಹೆಂಡತಿಯರ ಪರಸ್ಪರ ಸಹಕಾರ ಎಷ್ಟು ಅಗತ್ಯವೆಂಬುದನ್ನು ಒತ್ತಿ ಹೇಳಿದಳು.

ಶಿಖಿಧ್ವಜನು ಇಷ್ಟು ವರ್ಷಗಳ ನಂತರದಲ್ಲಿ ಪರಿಸ್ಥಿತಿಯನ್ನು ಅರಿತನು. ತಾನು ಕರ್ತವ್ಯ ಭ್ರಷ್ಟನಾದೆನೇನೊ ಎಂಬ ಅನುಮಾನ ಅವನಲ್ಲಿ ಉದಯಿಸಿತು. ಈಗ ಜ್ಞಾನಿಯಾಗಿದ್ದ ಪತ್ನಿಯ ಉಪದೇಶ ಅವನ ಮನವನ್ನು ತಾಕಿತು. ಅವಳು ಹೇಳುವುದನ್ನು ಆಲಿಸುತ್ತಿದ್ದ.

"ತಾವು ವಿರಕ್ತರಾಗಿಯೇನೊ ಅರಣ್ಯಕ್ಕೆ ಬಂದಿರಿ. ಉತ್ತಮ ವಿಚಾರಗಳ ಬಗ್ಗೆ ಚಿಂತಿಸುವಷ್ಟು ಚಿತ್ತ ಸ್ವಾಸ್ಥ್ಯ ತಮ್ಮಲ್ಲಿ ಇರಲಿಲ್ಲ. ಹೃದಯದ ಮಲಿನತೆಯನ್ನು ತಪಸ್ಸು ತೊಳೆದಿರುವುದರಿಂದ ನಾನು ತಮ್ಮ ಸೇವೆಗೆ ಸಿದ್ಧಳಾಗಿರುವೆನು" ಆನಂದಾಶ್ರುಗಳಿಂದ ತುಂಬಿದ ಕಣ್ಣುಗಳಿಂದ ಚೂಡಾಲಾ ಅವನನ್ನು ನೋಡುತ್ತಾ ಹೇಳಿದಳು.

"ಈಗೇನು ಮಾಡಬೇಕೆನ್ನುತ್ತೀ ? ಬೇಕಿದ್ದರೆ ನಾವಿಬ್ಬರೂ ಇಲ್ಲಿಯೇ ಇರಬಹುದು. ಇಲ್ಲವೆ ಸಶರೀರರಾಗಿ ಸ್ವರ್ಗಕ್ಕೆ ಹೋಗಬಹುದು. ನನ್ನ ತಪಸ್ಸಿನ ಪ್ರಭಾವದಿಂದ ನಿನ್ನನ್ನೂ ಸಶರೀರರಾಗಿ ಸ್ವರ್ಗಕ್ಕೆ ಕರೆದೊಯ್ಯಬಲ್ಲೆ."

"ನನಗೆ ಸ್ವರ್ಗದ ಆಕರ್ಷಣೆ ಇಲ್ಲ. ತ... ನಿಂದ ಪಡೆಯಬೇಕಾದದ್ದೂ ಏನೂ ಇ... ಆದರೆ ರಾಜ್ಯ ನಮ್ಮ ಪಾಲಿಗೆ ಬಂದಿದ್ದು, ಅ... ನಿರ್ವಹಣೆ ನಮ್ಮ ಕರ್ತವ್ಯವಾಗಿದೆ. ಪ್ರಜಾ ಪಾಲನೆಯ ಕರ್ತವ್ಯವು ತಮಗೆ ಕರ್ಮವಿಧಿಯಿಂದ ದೊರೆತಿರುವಾಗ ಅದನ್ನು ದೂರ ಮಾಡ... ರೇಕೆ ?"

ಪತಿಯ ಮಾತಿನಲ್ಲಿನ ಅಂತರ್ಯವನ್ನು ...ಧ್ವಜನು ಅರಿತ. ಚೂಡಾಲಾಳೊಂ... ರಾಜಧಾನಿಗೆ ಹಿಂತಿರುಗಿದ. ಆತ್ಮದರ್ಶ... ಸಂಪನ್ನಳಾದ ಅವಳು ಸಹಧರ್ಮಿಣಿಯ ... ದಲ್ಲಿ ಅವನ ಕರ್ತವ್ಯವನ್ನು ಪೂರ್ಣಗೊಳಿಸು... ರಲ್ಲಿ ಸಹಕರಿಸಿದಳು. ಗೊತ್ತಾದ ಸಮಯ... ವರೆಗೂ ಅವರಿಬ್ಬರೂ ರಾಜ್ಯಭಾರ ಕಾರ್ಯ... ತೊಡಗಿ, ಅಂತ್ಯದಲ್ಲಿ ಪರಿನಿರ್ವಾಣ ಪಡೆದ... ಆಗ ಶಿಖಿಧ್ವಜನು ಚೂಡಾಲಾಳಿಗೆ ಆಶೀರ್ವಾ... ಮಾಡಿದ.

"ವಿಶ್ವದ ಶ್ರೇಷ್ಠ ಸತೀಮಣಿಯರಲ್ಲಿ ಸ... ಸನ್ಮಾನಿತಳಾಗು !"

ಪತ್ನಿಗೆ ಪತಿಯ ಹಾರ್ದಿಕ ಆಶೀರ್ವಾ... ಭಗವಂತನು ವರ ನೀಡಿದುದಕ್ಕಿಂತಲೂ ಹೆಚ್ಚ...

ಹೀಗೆ ಪತಿ ಪಾರಾಯಣಳಾದ, ... ಕರ್ತವ್ಯ ನಿರ್ವಹಣೆಯಲ್ಲಿ ಸಹಾಯಕ... 'ಪತ್ನಿ' ಎನ್ನುವವಳು ಹೇಗೆ ಇರಬೇಕು ... ಆದರ್ಶವನ್ನು ಸ್ಥಾಪಿಸಿ, ಮುಂದಿನ ವ... ಯರಿಗೆ ಮಾರ್ಗದರ್ಶಕಳಾದ ಚೂಡಾಲ... ಸದಾ ಪೂಜನೀಯಳು.

(ವಿವಿಧ ಮೂಲಗಳಿ...



ಯುವವಾಣಿ

# ಪ್ರಸಾದ-ಕಾಯ

ದೇವರು ಕೊಟ್ಟ ವರಪ್ರಸಾದ ಈ ನಮ್ಮ ಕಾಯ. ನಮ್ಮದು ಸಾಧನ ಶರೀರ. ಈ ಶರೀರದ ಮೂಲಕ ಧರ್ಮವನ್ನು ಗಳಿಸಬೇಕು. ಮಾನವನ ದೇಹ ಎಂತಹ ಅದ್ಭುತ ಕಲಾಕೃತಿ! ಇದರ ಮಹತ್ತ್ವ ಬಳಸುವುದರಲ್ಲಡಗಿದೆ. ಮಹನೀಯರೆಲ್ಲ ಸಾಧಿಸಿಸಿದ ಎತ್ತರಗಳೆಲ್ಲವೂ ಸತತವಾಗಿ ದೇಹಶ್ರಮ–ಬುದ್ಧಿಶ್ರಮದಿಂದ ದುಡಿದು ಪಡೆದಂತಹವು. ಪ್ರಸಾದವಾಗಿ ಬಂದ ಈ ಕಾರ್ಯವನ್ನು ಲೌಕಿಕ ಭೋಗಕ್ಕೆ ಮಾತ್ರ ಸೀಮಿತಗೊಳಿಸಿಕೊಂಡರೆ ಆತ್ಮೋನ್ನತಿ ಕನಸು. ಮಾನವ ಪರಿಸ್ಥಿತಿಯ ಶಿಶುವಾದರೂ ಪರಿಸರವನ್ನು ಮೆಟ್ಟಿ ಧರ್ಮ ಸಾಧನೆಯನ್ನು ಗಳಿಸಲು ಶ್ರಮಪಟ್ಟರೆ ಪರಿಶುದ್ಧ ಆತ್ಮಸಂಪತ್ತನ್ನು ಅನುಭವಿಸಬಹುದು.

ಮಾನವ ಹುಟ್ಟಿನಿಂದ ಸ್ವತಂತ್ರ; ಆದರೆ ಎಲ್ಲೆಡೆಯು ಈ ದೇಹಶಕ್ತಿಯನ್ನು ನಂಬಿ, ಅವನೇ ಬಂಧನದಲ್ಲಿದ್ದಾನೆ ಈ ಬಂಧನ ಬಂಧುರವಾಗ ಬೇಕಾದರೆ ಬಾಳು ಉದಾತ್ತವಾಗಿ ವಿಕಸಿಸಬೇಕು. ಈ ಶರೀರದ ಮಹತ್ತ್ವ–ಅದರ ತ್ಯಾಗದಲ್ಲಿಯೇ ಅಡಗಿದೆ "ದೈಹಿಕ ಭೋಗದ ವಿರಕ್ತಿ........ಪಾವನವೋ ಜನ್ಮಕ್ಕೆ, ಮರುಳು ಮುನಿಯ" ಎನ್ನುತ್ತಾರೆ ಡಿ. ವಿ. ಗುಂಡಪ್ಪನವರು. ದೇಹ ದುರ್ಬಲವಾದರೂ ಗುರಿ, ಸಾಧನೆ ದುರ್ಬಲವಾಗದೆ ಉನ್ನತ ಮಾರ್ಗದಲ್ಲಿದ್ದರೆ ಸಾಕು. ಈ ಮಾರ್ಗದಲ್ಲಿ ಸೋಲು ಅಪರಾಧವಲ್ಲ, ಅಲ್ಪಧ್ಯೇಯವೇ ಅಪರಾಧ.

ದೇಹದಿಂದ ಅಗಾಧ ಕಾರ್ಯವನ್ನು ಸಾಧಿಸಬಹುದು; ಆದರೆ ದೇಹ ಕೆಡುವುದು, ವಿಕಾರ ವಿಷಯಗಳಿಂದ, ದರಿದ್ರ ಬಯಕೆಗಳಿಂದ, ಗುರಿಯಿಲ್ಲದ ವಿಚಾರ ವಿಮರ್ಶೆಗಳಿಂದ, ಮತ್ತು ಬದಲಾವಣೆಯಿಲ್ಲದ ಪ್ರವೃತ್ತಿಯಿಂದ; ದೇಹ ಅಸ್ಥಿರವಾದರೂ, ನಮ್ಮ ಶೀಲ ಕಲ್ಪಾಂತರದವರೆವಿಗೂ ಇರುತ್ತದೆ. ಈ ದೃಷ್ಟಿಯಿಂದ ಭಾಗವತ "ದುರ್ಲಭೋ ಮಾನುಷೇ ದೇಹೇ" ಎನ್ನುತ್ತದೆ.

ಧರ್ಮದ ಹಾದಿಯಲ್ಲಿ ಮುಳ್ಳು ಚೆಲ್ಲುವ ಮೋಹದ ರೂಪಗಳು ಅಸಂಖ್ಯ. ಆ ರೂಪರಾಶಿಯನ್ನೆಲ್ಲಾ ಪರಿಶೀಲಿಸಿದರೆ ಪ್ರಧಾನವಾದ ಅಂಶ ಕಂಡು ಬರುವುದು ಸಂಕುಚಿತ ದೇಹಬುದ್ಧಿ. ದೇಹಾತೀತ ಬುದ್ಧಿಯೇ ಆತ್ಮದ ಭಾಸ. ಆತ್ಮದ ಅಖಂಡತೆ, ದೇಹದ ಕ್ಷುದ್ರತೆಗಳನ್ನು ಅರಿತು ಆತ್ಮದ ಮಹತ್ತ್ವವನ್ನು ಹೆಚ್ಚಿಸುವ ಕಲೆಯನ್ನು ಕಲಿಯಬೇಕು. ಹೇಗೆ ಆತ್ಮದ ಮಹತ್ತ್ವವನ್ನು ಹೆಚ್ಚಿಸಿ ಕೊಳ್ಳುವುದು?........ಕಾಯಿಕ ತಪಸ್ಸನ್ನು ಆಚರಿಸು ಎನ್ನುತ್ತದೆ ಭಗವದ್ ಗೀತೆ–

ದೇವದ್ವಿಜ ಗುರು ಪ್ರಾಜ್ಞ
ಪೂಜನಂ ಶೌಚಮಾರ್ಜವಂ ।
ಬ್ರಹ್ಮಚರ್ಯ ಮಹಿಂಸಾ ಚ
ಶಾರೀರಂ ತಪ ಉಚ್ಯತೇ ॥

ಶರೀರ ಹೇಗೋ ಹಾಗೇ ಮನದ ಬಲವೂ ಮಿತ, ಈ ಮೈ ಗಳಿಗೆ–ಗಳಿಗೆಗೆ ಬದಲಾಗುತ್ತದೆ–ಬಾಲ್ಯ, ಯೌವನ, ಮುಪ್ಪುಗಳಿಂದ. ಆದುದರಿಂದ ಇದು ನಿತ್ಯಪರಿವರ್ತನಶೀಲವುಳ್ಳದ್ದು, ಇದರ ರಕ್ಷಣೆ ಅಗತ್ಯ. ಏಕೆಂದರೆ ಶಾಶ್ವತವಾದ ಬಾಳಮೌಲ್ಯವನ್ನು ತಿಳಿಯುವ ಸಾಧನ ಈ ನಮ್ಮ ಶರೀರ. ಇದನ್ನರಿತ ವಿವೇಕಿಗಳು ಈ ಶರೀರವನ್ನು ಯೋಗಕ್ಕಾಗಿ ಬಳಸುತ್ತಾರೆ, ಪಾಮರರು ಭೋಗಕ್ಕಾಗಿ ಬಳಸುತ್ತಾರೆ; ಆದರೆ ವಿಚಾರ ಹೀನರಾದವರಿಗೆ – ಭೋಗಕ್ಕೂ – ಯೋಗಕ್ಕೂ ಸಲ್ಲವುದಿಲ್ಲ.

ವಿಜ್ಞಾನ ರೀತ್ಯ ಕಾಯ ಯಂತ್ರದ ರಚನೆರೀತಿಗಳನ್ನು ಪರಿಶೀಲಿಸೋಣ. ನಮ್ಮ ಶರೀರ ಪಂಚಭೂತಗಳಲ್ಲಿರುವ ಇಪ್ಪತ್ತೈದು ಅಂಶಗಳಿಂದ ಕೂಡಿದೆ. ಅವುಗಳು ಕ್ರಮವಾಗಿ ಹೀಗಿವೆ. ಪೃಥ್ವಿಯಲ್ಲಿ – ಪಂಚ ಕರ್ಮೇಂದ್ರಿಯ (ಬಾಯಿ, ಕೈ, ಕಾಲು, ಆಸನ, ಶಿಶ್ನ) ಅಗ್ನಿಯಲ್ಲಿ–ಪಂಚ ಜ್ಞಾನೇಂದ್ರಿಯ (ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು,) ಆಕಾಶದಲ್ಲಿ – ಪಂಚ ಅಂತಃಕರಣ (ಜ್ಞಾನ, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ) ವಾಯುವಿನಲ್ಲಿ – ಪಂಚವಾಯು (ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ) ಮತ್ತು ಜಲದಲ್ಲಿ ಪಂಚ ತನ್ಮಾತ್ರಗಳು (ರಸ, ಶಬ್ದ, ಸ್ಪರ್ಶ, ರೂಪ, ಗಂಧ). ಇಂಥಹ ಇಪ್ಪತ್ತೈದು ಅಂಶಗಳಿಂದ ಕೂಡಿದ ಶರೀರವೇ ಸ್ಥೂಲ ಶರೀರ. ಇದು ಜಡ. ಚೈತನ್ಯ. ಶರೀರವೇ ಸೂಕ್ಷ್ಮ ಶರೀರ. ಇದು ಹದಿನೇಳು ಅಂಶಗಳಿಂದ ಕೂಡಿರುತ್ತದೆ. ಪಂಚ ಜ್ಞಾನೇಂದ್ರಿಯ, ಪಂಚ ವಾಯು, ಪಂಚತನ್ಮಾತ್ರಗಳು, ಮತ್ತು ಮನಸ್ಸು ಚಿತ್ತ. ಕಾರಣ ಶರೀರ ಮಾತ್ರ ಚಿತ್ತ ಮತ್ತು ಜ್ಞಾನದಿಂದ ಕೂಡಿರುವುದು. ಮತ್ತೊಂದು ಶರೀರವಿದೆ-ಅದೇ ಮಹಾಕಾರಣ ಶರೀರ. ಇದು ಸರ್ವಸಾಕ್ಷಿ ಮತ್ತು ಸ್ವಯಂ ಜ್ಯೋತಿಯಿಂದ ಕೂಡಿರುವುದು, ಇವುಗಳೇ ಕ್ರಮವಾಗಿ ವಿಶ್ವಜೀವ, ತೈಜಸ ಜೀವ, ಪ್ರಾಜ್ಞಾಜೀವ ಮತ್ತು ಹಿರಣ್ಯಗರ್ಭವಾಗಿ ವಿಂಗಡಿಸಲ್ಪಟ್ಟಿದೆ, (ಆಧಾರ–ಉಪನಿಷತ್ತು.)

ಈ ಮಹಾಕಾರಣ ಶರೀರವನ್ನು ಸಾಕ್ಷಾತ್ಕರಿಸಿ ಕೊಳ್ಳ ಬೇಕಾದರೆ ಅಷ್ಟಾಂಗಯೋಗ (ಯಮ,ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ ಮತ್ತು ಸಮಾಧಿ) ಮತ್ತು ಶಮ, ದಮ, ಉಪರತಿ, ಶ್ರದ್ಧಾ, ಸಹನೆ ಮತ್ತು ವೇದಾಂತ ಚಿಂತನವನ್ನು ಅಭ್ಯಾಸ ಮಾಡಬೇಕು; ಆಗ ಜಡ ಶರೀರ–ಚೈತನ್ಯವಾಗಿ ಬದ್ಧತ್ವವನ್ನು ಮೀರಿ ಪರಮಾನಂದವನ್ನು ಪಡೆಯುತ್ತದೆ.

ನಮ್ಮ ಶರೀರ ಪರಿಣಾಮವುಳ್ಳದ್ದಾದರೂ (ಅಸ್ತಿತೆ, ಜಾಯತೆ, ವರ್ಧತೆ, ಪರಿಣತೆ, ಅಪಕ್ಷೀಯತೆ, ಮತ್ತು ವಿನಸ್ಯತೆ

'ಮತ್ತೀಕೆರೆ ಅನಂತು'

ಎಂಬ ಆರು ಭಾವಗಳು,) ಷಡಾಧಾರ ಚಕ್ರದಿಂದ (ಆಜ್ಞೇಯ. ವಿಶುದ್ಧ, ಮಣಿಪೂರಕ, ಮೂಲಾಧಾರ, ಸ್ವಾಧಿಷ್ಠಾನ, ಅನಾಹತ) ಹೃದಯದಲ್ಲಿ 'ಓಂ' ಎಂಬ ಪ್ರಣವ ಮಂತ್ರವನ್ನು ಜಪಿಸಿದಾಗ "ಆತ್ಮದರ್ಶನ" ಅನುಭವಕ್ಕೆ ಬರುವುದು ಈ ದೃಷ್ಟಿಯಿಂದಲೇ ಜ್ಞಾನಿಗಳು–

" ನರದೇಹದಿಂದಲೇ ಸಚ್ಚಿದಾನಂದ ಪದವಿ ಸಿಗುವುದು " ಎನ್ನುತ್ತಾರೆ.

ದೇಹವನ್ನು ಉಪಕರಣವೆಂದು ಬಳಸದೆ ಅದೇ ಆತ್ಮವೆಂದು ತಿಳಿದಾಗ ಕ್ಷುದ್ರವಾದ ಮೈ-ಮತ್ತಷ್ಟು ಕ್ಷುದ್ರವಾಗುತ್ತದೆ. ಆತ್ಮಕ್ಕೆ ಮುಕ್ತಾನಂದ ಬೇಕು. ಆತ್ಮ ವ್ಯಾಪಕವಾಗಲು ಸದಾ ಚಡಪಡಿಸುತ್ತಿರುತ್ತದೆ. ಇಡೀ ಜಗತ್ತನ್ನೇ ಹಬ್ಬಿಕೊಳ್ಳಬೇಕೆಂಬ ಬಯಕೆ ಇರುತ್ತದೆ. ಈ ದೃಷ್ಟಿಯಿಂದ ಬಸವಣ್ಣನವರು

'ಕೂಡಲ ಸಂಗಮ ದೇವರನೊಲಿಸ ಬಂದ ಪ್ರಸಾದ ಕಾಯವ ಕೆಡಿಸಲಾಗದು' ಎಂದರೆ, ಮಾಲೂರು ಸೊಣ್ಣಪ್ಪನವರು–

ಎಂಥಾ ಮಾನವ ಜನ್ಮ
ಏನು ಕೆಡಿಸಿ ಬಿಟ್ಟೀರಪ್ಪಾ
ಇಂಥಾ ಜನ್ಮಾ ನಿಮ್ಗೆ ಸಿಕ್ಕೀತೇನ್ರಪ್ಪಯ್ಯ
ನಿದ್ರೆಯ ಮಾಡಿ ನೀವು ಕೆಟ್ಟೀರ್ರಪ್ಪಯ್ಯ
..............................
ಕಾಲು ಕೈ ಕಣ್ಣು ಮೂಗು ಮೇಲ್
ನಾಲಿಗೀರಲಿಕ್ಕಾಗಿ
ಕಾಲ ಹರನ ಪೂಜೆ ನೀವು ಬಿಟ್ಟೀರ್ರಪ್ಪಯ್ಯ
ಕಾಲ ಯಮನವರು ಬಂದು ನಿಮ್ಮ
ಕಾಲ ಹಿಡಿದು
ಒಯ್ಯುವಾಗ ತಾಳೋ ತಾಳೆಂದರೆ
ಹ್ಯಾಂಗೆ ತಾಳ್ಯರ್ರಪ್ಪಯ್ಯ

ಎನ್ನುತ್ತಾರೆ. ಪ್ರೊ॥ ಎಂ. ವಿ. ಸೀತಾರಾಮಯ್ಯನವರು 'ತೆರವು ಮಾಡೀ ಮನೆಯ' ಎಂಬ ಕವನದಲ್ಲಿ–

ಕ್ಷಣ ಕ್ಷಣಕ್ಕೂ
ಪ್ರತಿದಿನ ಪ್ರತಿವರ್ಷ ವರ್ಷವೂ
ಈ ಮನೆ ನನ್ನದಲ್ಲ
ಇದಕೆ ಬೇರೊಬ್ಬ ಮಾಲೀಕನಿರುವನು
ಎನ್ನುವುದನು ಮರೆಯದಿರು
..............................
ಬಾಡಿಗೆಯ ಕೊಡದೆಯೆ
ಠಿಕಾಣಿ ಹಾಕಿರುವೆ ಹೋಗಲಿ–
ಮನೆಯನಾದರು ಒಪ್ಪವಾಗಿಟ್ಟುಕೊಂಡಿ
ಹೆಯ
ಚೆನ್ನವಾಗಿರಿಸಿ ಕೊಂಡರೆ ಮನೆಯ
ಮನಸು ?
ಮಾಲೀಕ ಬಂದು ಸೂಚನೆಯ
ಕೊಟ್ಟೊಡನೆ ತೆರವು ಮಾಡು ಮನೆ
ಮನೆಯೊಡೆಯ
ಮೆಚ್ಚಿದರೆ ನಿನ್ನ ನಡೆಯ
ಮನೆಯೊಂದ ನೀಡುವನು ತಾನಾಗಿ
ಇಲ್ಲ ಬಾಡಿಗೆ ಅದಕೆ, ಅರಸಿನ ಅಂಕೆ
..............................
ಮುಂದಿನ ಮನೆಗೆ ಪ್ರಯಾಣ ಸಲೀಸ

ಒಟ್ಟಿನಲ್ಲ ಮನುಷ್ಯನು ತನ್ನ ಶ ದಿಂದ, ಮಾತಿನಿಂದ ಮನಸ್ಸಿನಿಂದ, ಅನ ಬಂದ ಸ್ವಭಾವದ ದೆಸೆಯಿಂದ ಎಲ್ಲವ ಪರಮಾತ್ಮನಿಗೆ ಅರ್ಪಿಸಿದರೆ–ಅದೇ ಮು ಅದೇ–ಪರಮಾನಂದ. ಆಗ ನಮ್ಮ ಕಾಯ ದೇವನಿತ್ತ ಪ್ರಸಾದ ಕಾಯವಾಗಿ ಪರಿಣ ಸುವುದು.

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾವಾ ಪ್ರಕೃತೇಃ
ಸ್ವಭಾವಾತ್
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ



# ಸೌಂದರ್ಯ ಲಹರಿ

ಓದು ಬರಹ ಬಲ್ಲವರೆಲ್ಲರೂ ಕಾವ್ಯ ಸೌಂದರ್ಯವನ್ನು ಸವಿಯಲಾರರು. ಅದನ್ನು ಬೇರೊಬ್ಬರು ತೋರಿಸಿಕೊಟ್ಟಾಗ ಚೆನ್ನಾಗಿ ಅರ್ಥವಾಗುತ್ತದೆ. ನಮ್ಮ ಬುದ್ಧಿ ರಾಗದ್ವೇಷ ರಹಿತವಾಗಿ, ಲಾಭ ನಷ್ಟದ ಚಿಂತೆ ಇಲ್ಲದೆ, ಕೇವಲ ಶುಭಶುದ್ಧ ದೃಷ್ಟಿಯಿಂದ ಕೂಡಿರುವಾಗ ಮಾತ್ರ ಸೌಂದರ್ಯ ಸಾಕ್ಷಾತ್ಕಾರ ಸಾಧ್ಯವಾಗುತ್ತದೆಂದು ಹಿರಿಯರು ಹೇಳುತ್ತಾರೆ. ಹೀಗೆ ತಲ್ಲೀನರಾಗಿ ನೋಡುವುದನ್ನು ಭಾರತೀಯ ತತ್ತ್ವಶಾಸ್ತ್ರಜ್ಞರು 'ಧ್ಯಾನ' ವೆಂದರು. ಸೌಂದರ್ಯ ಮೀಮಾಂಸಕರು 'ಪ್ರತಿಭಾ ದೃಷ್ಟಿ'–ಎಂದರು. ಕೆಲವರು "ತಪಸ್ಸು"–ಎಂದರು; ಕೆಲವರು "ಉಪಾಸನೆ"– ಎಂದರು. ಯಾವ ವ್ಯಕ್ತಿಯನ್ನೇ ಆಗಲಿ, ಯಾವುದೇ ವಸ್ತುವನ್ನಾಗಲೀ ಕವಿ ಅಥವ ಋಷಿಯು ನೋಡುವ ದೃಷ್ಟಿಯಿಂದ ನೋಡಿದರೆ ಸುಂದರವಾಗಿ ಕಾಣುತ್ತದೆ; ಸೌಂದರ್ಯದ ದರ್ಶನವಾಗುತ್ತದೆನ್ನುವುದನ್ನು ಒಂದು ಸಿದ್ಧಾಂತವಾಗಿ ತೆಗೆದುಕೊಂಡಾಗ, ಸೌಂದರ್ಯವೆಂಬ ಆ ನಿಗೂಢತತ್ತ್ವದ ಬಗ್ಗೆ ಪುಂಖಾನುಪುಂಖವಾಗಿ ಚರ್ಚೆ ಏಳುತ್ತದೆ. ಸೌಂದರ್ಯವೆಂದರೇನು? ಅದು ಕಣ್ಣಿಗೆ ಕಾಣುತ್ತದೆಯೆ? ಮನಸ್ಸಿಗೆ ಗೋಚರವಾಗುತ್ತದೆಯೆ? ಹೃದಯಕ್ಕೆ ಭಾಸವಾಗುತ್ತದೆಯೆ? ಮನೋಭಾವಗಳು ಬದಲಾವಣೆಯಾದಂತೆಲ್ಲಾ, ಸೌಂದರ್ಯದ ಕಲ್ಪನೆಯೂ ವ್ಯತ್ಯಾಸವಾಗುತ್ತದೆಯೆ? ಹಾಗೆ ವ್ಯತ್ಯಾಸವಾದರೆ ಅದು ಸೌಂದರ್ಯ ಹಾಗಾದೀತು? ಸೌಂದರ್ಯವು ವ್ಯಕ್ತಿನಿಷ್ಠವೋ? ತತ್ತ್ವನಿಷ್ಠವೋ? ಈ ಎಲ್ಲ ಪ್ರಶ್ನೆಗಳ ಹಿನ್ನಲೆಯಲ್ಲಿ ಸತ್ಯಂ–ಶಿವಂ–ಸುಂದರಂ – ಎಂಬ ಮಾತನ್ನು ಆಳವಾಗಿ ಆಲೋಚಿಸಿದಾಗ ನಾವು ಬೇರೊಂದು ಪ್ರಪಂಚಕ್ಕೆ ಕಾಲಿಟ್ಟಂತಾಗುತ್ತದೆ. ನಮ್ಮ ಹಿರಿಯರು ಸೌಂದರ್ಯವನ್ನು ಸತ್ಯ–ಶಿವಗಳ ಸಾಲಿನಲ್ಲಿ ಪ್ರತಿಷ್ಠಿತಗೊಳಿಸಿದ್ದಾರೆ. ವಸ್ತುತಃ ಈ ಮೂರೂ ಅಭಿನ್ನ ತತ್ತ್ವಗಳೇ ಆಗಿವೆ.

ದೈಹಿಕ ಸೌಂದರ್ಯ ಬೇರೆ–ದೈವಿಕ ಸೌಂದರ್ಯ ಬೇರೆ. ಒಂದು ಅಶಾಶ್ವತ – ಒಂದು ಶಾಶ್ವತ, ಒಂದು ದೃಗ್ಗೋಚರ. ಇನ್ನೊಂದು ಕಲ್ಪನಾಗಮ್ಯ. ಕಲ್ಪನೆ ಸುರುಚಿಪೂರ್ಣವಾದಷ್ಟೂ ಸೌಂದರ್ಯದ ರಾಮಣೀಯಕತೆ ಹೆಚ್ಚುತ್ತದೆ.

ಬ್ರಹ್ಮವಸ್ತುವನ್ನು ಯಾರು ಯಾವ ಹೆಸರಿನಿಂದ ಬೇಕಾದರೂ ಕರೆಯಬಹುದು. ಅದು ಜಗತ್ತಿಗೆ ತಂದೆಯೂ ಆಗಿದೆ– ತಾಯಿಯೂ ಆಗಿದೆ. ಆದ್ದರಿಂದಲೇ ಕಾಳಿದಾಸ–ಜಗತಃ ಪಿತರೌ ವನ್ದೇ–ಎಂದ. ಉಪಾಧಿ ಶರೀರಗಳ–ಸ್ಥೂಲ ಶರೀರಗಳ ದೃಷ್ಟಿಯಿಂದ ಸ್ತ್ರೀ–ಪುರುಷ– ಎಂಬ ವ್ಯತ್ಯಾಸಕಾಣುತ್ತವೆ. ಉಪಾಧಿರಹಿತವಾಗಿ ನೋಡಿದಾಗ ಬ್ರಹ್ಮವಸ್ತು ಒಂದೇ ಸಮುಜ್ವಲವಾಗಿ ನಿಲ್ಲುತ್ತದೆ.

ಯಾವುದೇ ಕಾರ್ಯವಾಗಬೇಕಾದರೂ ಅದಕ್ಕೆ ತಕ್ಕಷ್ಟು ಶಕ್ತಿ ಅಗತ್ಯವೆಂಬುದು ವೈಜ್ಞಾನಿಕ ಸತ್ಯ. ಶಕ್ತಿಗೆ ಯಾರೂ ಶಕ್ತಿಯನ್ನು ಕೊಡಬೇಕಾಗಿಲ್ಲ. ಆದ್ದರಿಂದಲೇ ಶಾಕ್ತೇಯ ಪಂಥದಲ್ಲಿ "ಸತ್ಯಶಕ್ತಿಸ್ವರೂಪಿಣೀ" ಎಂಬ ಮಾತಿದೆ. ಶಕ್ತಿ ಅತ್ಯಂತ ಮಹತ್ವವಾಗುವುದರಿಂದ ಅದು ಆರಾಧ್ಯ ವಸ್ತುವಾಯ್ತು – ಪೂಜ್ಯ ವಸ್ತುವಾಯ್ತು. ಭಾರತೀಯ ಪರಂಪರೆಯಲ್ಲಿ ಶಕ್ತಿಪೂಜೆ ಹೊಸದೇನೂ ಅಲ್ಲ. ಮಾತಾ ಪೂರ್ವರೂಪಂ ಎನ್ನುತ್ತದೆ ತೈತ್ತಿರೀಯ ಶ್ರುತಿ. ಋಗ್ವೇದದಲ್ಲಿನ ದೇವೀಸೂಕ್ತ ಶಕ್ತ್ಯಾರಾಧನೆಯ ಪ್ರಾಚೀನತೆಗೆ ಸಾಕ್ಷಿಯಾಗಿದೆ. ಸಾಮಾನ್ಯವಾಗಿ ಮಕ್ಕಳಿಗೆ ತಂದೆಗಿಂತಲೂ ತಾಯಿಯಲ್ಲಿ ಹೆಚ್ಚು ಸಲಿಗೆ ಇರುತ್ತದೆ. ಬಹುಶಃ ಈ ಕಾರಣದಿಂದಲೇ ಮಾತೃಪೂಜಾ – ದೇವೀಪೂಜಾವಿಧಾನ ಜಾರಿಗೆ ಬಂದಿರಬಹುದು. ತ್ವಮೇವ ಮಾತಾ ಚ ಪಿತಾ ತ್ವಮೇವ–ಎಂಬ ಮಾತಿನ ಔಚಿತ್ಯವನ್ನಾಲೋಚಿಸಿದಾಗ, ಆರಾಧನೆಯು ಯಾವುದೇ ರೂಪದಲ್ಲಾದರೂ ಬಾಧಕವಿಲ್ಲವೆಂದು ತಿಳಿದು ಬರುತ್ತದೆ.

ಹಿರಿಯರು ಮಾತೃತ್ವಕ್ಕೆ ಮಹತ್ವಕೊಟ್ಟು ಚಿನ್ಮಯಿ ಭಗವತಿಯ ದಿವ್ಯ ಭವ್ಯವರ್ಣನೆ ಮಾಡಿರುವ ನಿದರ್ಶನಗಳು ಸಾಕಷ್ಟಿವೆ.

ಯಾ ದೇವೀ ಸರ್ವ ಭೂತೇಷು
ಮಾತೃರೂಪೇಣ ಸಂಸ್ಥಿತಾ
ನಮಸ್ತಸ್ಯೈ ನಮೋನಮಃ

ಎಂದು ದುರ್ಗಾ ಸಪ್ತಶತಿ ಹಾಡಿ ಹೊಗಳುವುದು ಯಾರನ್ನು? ಇದೇ ಭವತಾರಿಣಿಯನ್ನು, ಇದೇ ಜಗದ್ಧಾತ್ರಿಯನ್ನು – ಇದೇ ಲೋಕಮಾತೆಯನ್ನು. ಲೋಕವೆಲ್ಲವೂ ತಾಯಿಯ ಕರುಣೆಯಿಂದಲೇ ಬದುಕಬೇಕು. ಆದ್ದರಿಂದಲೇ ಜಗನ್ಮಾತೆಯ ಬಗ್ಗೆ ಪೂಜ್ಯಭಾವ ಲಲಿತಾಸಹಸ್ರನಾಮದ ಮೊದಲ ಮಾತೇ ಶ್ರೀ ಮಾತಾ– ಎಂದಿದೆ!! ಸಂಸ್ಕೃತ ಸಾಹಿತ್ಯದಲ್ಲಿ ಸೌಂದರ್ಯಲಹರಿ ಆನಂದಲಹರಿ– ಎಂಬ ಎರಡು ಗ್ರಂಥಗಳಿವೆ. ಸೌಂದರ್ಯ–ಆನಂದ ಇವು ಒಂದೇ ನಾಣ್ಯದ ಎರಡು ಮುಖಗಳು. ಒಂದಕ್ಕೊಂದು ಪೂರಕ, ಒಂದಕ್ಕೊಂದು ಪ್ರೇರಕ.

ಭಗವಂತನನ್ನು ಕೆಲವರು ವಿಶ್ವನಾಥನೆಂದರು. ಕೆಲವರು ವಿಶ್ವಮಾತೆಯೆಂದರು!! ಜಗನ್ಮಾತೆ ಶಂಕರಿಯೂ ಹೌದು. ಭಯಂಕರಿಯೂ ಹೌದು; ಆರ್ತಜನ ಅಭಯಂಕರಿಯೂ ಹೌದು.

"ಸೌಂದರ್ಯಲಹರಿ"–ನೂರು ಶ್ಲೋಕಗಳಿಂದ ಕೂಡಿದ ಗ್ರಂಥ. ಇದು ಮಾಲಿಕೆ, ರತ್ನಮಾಲಿಕೆ, ರಾಗರತ್ನಮಾಲಿಕೆ, ಶತರಾಗರತ್ನಮಾಲಿಕೆ. ಈ ಗ್ರಂಥದ ವಿಶ್ಲೇಷಣೆಯನ್ನೆರಡು ರೀತಿಯಲ್ಲಿ ಮಾಡಲವಕಾಶವಿದೆ. ಒಂದು ತಂತ್ರಮಂತ್ರ ಶಾಸ್ತ್ರದೃಷ್ಟಿಯಿಂದ. ಇನ್ನೊಂದು ಭಕ್ತಿ ಸೌಂದರ್ಯದ ದೃಷ್ಟಿಯಿಂದ – ಕಾವ್ಯಮಯದೃಷ್ಟಿಯಿಂದ. ಹೆಸರೇ ಸೂಚಿಸುವಂತೆ ಇದು ಅಚಿನ್ತ್ಯ, ಅಪಾರ, ಅದ್ಭುತ ದೈವೀ ಸೌಂದರ್ಯದ ಭೂಮಾನುಭವದಿಂದ ಪ್ರೇರಿತವಾಗಿದೆ– ಎಂಬುದಂತೂ ನಿರ್ವಿವಾದ ಸಂಗತಿ. ಸೌಂದರ್ಯಲಹರಿ– ಎಂತಹ ಧ್ವನಿಪೂರ್ಣವಾದ ಮಾತು!! ಸಾಗರದ ಲಹರಿಗಳನಂತವಾಗಿರುವಂತೆ, ಇಲ್ಲಿ ಸೌಂದರ್ಯ ಸಾಗರದಲೆಗಳೂ ಅನಂತವಾಗಿವೆ; ಅಗಣಿತವಾಗಿವೆ.

ತ್ವದೀಯಂ ಸೌಂದರ್ಯಂ
ತುಹಿನಗಿರಿಕನ್ಯೇ ತುಲಯಿತುಂ।
ಕವೀಂದ್ರಾಃ ಕಲ್ಪಂತೇ
ಕಥಮಪಿ ವಿರಿಂಚಿ ಪ್ರಭೃತಯಃ॥

ಹಿಮಾದ್ರಿಸುತೇ, ನಿನ್ನ ಸೌಂದರ್ಯವನ್ನು ಬಣ್ಣಿಸಲು ಬ್ರಹ್ಮನೇ ಆದಿಯಾಗಿ ಉಳಿದೆಲ್ಲ ಕವಿಗಳೂ ಹೇಗೆತಾನೆ ಸಮರ್ಥರಾದಾರು– ಎಂದು ಉದ್ಗಾರನೆತ್ತಿರುವ ಕವಿ, ಇನ್ನೊಂದು ಕಡೆ ಹೇಳುತ್ತಾರೆ–

ತ್ವದನ್ಯಃ ಪಾಣಿಭ್ಯಾಂ
ಅಭಯ ವರದೋ ದೈವತಗಣಃ।
ಶರಣ್ಯೇ ಲೋಕಾನಾಂ
ತವ ಹಿ ಚರಣಾವವ ನಿಪುಣೌ।

ನಿನ್ನ ವಿನಃ ಉಳಿದೆಲ್ಲ ದೇವತೆಗಳೂ ಕೈಯಿಂದ ಅಭಯಪ್ರದಾನ ಮಾಡುತ್ತಾರೆ. ಆದರೆ ನಿನ್ನ ಪಾದಪದ್ಮಗಳೇ ಸಾಕು – ಅಭಯ ನೀಡುವ

ವಿದ್ವಾನ್ ಬಿ.ನ. ಗುಂಡೂರಾವ್

### ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ. ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

* ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14′×18′ ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.
* ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

## ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ. ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

ಎ. ಟಿ. ಸಿ. ಕಾಟೇಜುಗಳು ಹಾಗೂ ಎಂ. ಬಿ. ಸಿ. ಕಾಟೇಜುಗಳಲ್ಲಿನ ಮೇಲಂತಸ್ತು ಕೋಣೆಗಳಿಗೂ ಇದೇ ರೀತಿ ದಾನಗಳನ್ನು ನೀಡಬಹುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ.
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಿಡಲಾಗುವುದು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ.ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಹೆಚ್ಚಿನ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

ಸಾಮರ್ಥ್ಯ ಪಡೆದಿವೆ. ಏಕೆಂದರೆ ನೀನು ಪ್ರಣತ ಜನಸೌಭಾಗ್ಯಜನನಿ. ಕೃಪೆ ಯಾವಾಗಲೂ ಪಾದಗಳ ಮೂಲಕವೇ ಇಳಿದು ಬರುತ್ತದೆ. ಆದ್ದರಿಂದಲೇ ಪಾದಾಭಿವಂದನ ಪದ್ಧತಿ ಬಳಕೆಯಲ್ಲಿರುವುದು.

ಜಗನ್ಮಾತೆಯ ಭವ್ಯ ಸೌಂದರ್ಯ ಬಣ್ಣನೆಗೆ ಮೀರಿದವಳು. ಅಶಾಶ್ವತ ಸೌಂದರ್ಯವು ಪ್ರಚೋದಕ ಹಾಗೂ ಮಾರಕ. ಶಾಶ್ವತ ಸೌಂದರ್ಯವು ಪ್ರಬೋಧಕ ಹಾಗೂ ತಾರಕ. ಸೌಂದರ್ಯಲಹರಿಯಲ್ಲಿ ಶ್ರೀ ಮಾತೆಯ ಆ ಪಾದಮೌಳಿ ಪರ್ಯಂತವಾದ ಸೌಂದರ್ಯವರ್ಣನೆ ಕಂಡುಬರುತ್ತದೆ. ಕವಿತಾಸಿದ್ಧಿಕರ ಅನುಸಂಧಾನ, ಸಾಯುಜ್ಯ ಪದ ಸ್ತೋತ್ರ, ಪಾಟಂಕಮಹಿಮೆ ತಾದಾತ್ಮಾನುಸಂಧಾನ – ಶಿವಶಕ್ತಿ ಸಂಬಂಧ – ಷಟ್‌ಚಕ್ರ ನಿರೂಪಣೆ – ಇತ್ಯಾದಿ ಅಂಶಗಳ ಜತೆಗೆ ಶ್ರೀಚಕ್ರ ವಿವರಣೆಯನ್ನೂ ಒಳಗೊಂಡಿರುವ ಸೌಂದರ್ಯಲಹರಿ ಕಾವ್ಯಗುಣ ಪರಿಶೋಭಿತವಾದ ಕೃತಿರತ್ನ. ಒಂದು ಕಡೆ "ಜಾಯಾಪತಿನ್ಯಾಯ"ದಂತೆ ಶಿವ ಶಕ್ತಿ ತತ್ತ್ವಗಳ ವಿವರಣೆ ಇದ್ದರೆ, ಇನ್ನೊಂದು ಕಡೆ ಶ್ರೀಮಾತೆಯ ಅರುಣ ಪದಾಂಬುಜ ಮಹಿಮೆಯ ವಿವರಣೆ ಇದೆ. ಆಕೆಯ ಶ್ರೀಪಾದರೇಣುವಿಗೆಂತಹ ಶಕ್ತಿ ಇದೆ! ಅದು ಜೀವಿಗಳಿಗೆ–ಚೈತನ್ಯಸ್ತಬಕಮಕರಂದ ಸ್ರುತಿ ಝುರಿ–ಯಂತೆ!! ಕ್ಷುದ್ರ ಜೀವಿಗಳಿಗೆ ಸಕಲ ಸೌಭಾಗ್ಯದಾಯಕ ಚಿಂತಾಮಣಿಯಂತೆ!! ತಾಪತ್ರಯಾಗ್ನಿ ಸಂತಪ್ತರಿಗೆ ಸಮಾಹ್ಲಾದನ ಚಂದ್ರಿಕೆಯಂತೆ!!

ಸುಂದರ ಸುರಭಿತ ಸುವಿಕಸಿತ ಪುಷ್ಪಗಳೇ ಬಿಲ್ಲು; ಭ್ರಮರ ಸಂದೋಹವೇ ಬಿಲ್ಲಿನ ಹಗ್ಗ ಪ್ರತ್ಯಂಚೆ. ಈ ಬಿಲ್ಲಿನಲ್ಲಿ ಹೂಡುವ ಐದು ಬಾಣಗಳು. ಈ ವಿಚಿತ್ರ ಧನುರ್ಧಾರಿ ಯಾರು! ಲೋಕ ಮೋಹಕ ಮನ್ಮಥ. ವಸಂತ ಈತನ ಸಹಾಯಕ ಸಚಿವನಂತೆ!! ಸುಖಸ್ಪರ್ಶ ನೀಡಿ ಪುಲಕಿತಗೊಳಿಸುವ ಮಲಯ ಮಾರುತವೇ ಇವನ ರಥ. ಸೌಂದರ್ಯವೇ ಸಾಕಾರವಾದ ಲೋಕ ಮೋಹಕ ಲಾವಣ್ಯಮೂರ್ತಿ ಮನ್ಮಥ. ಎಲ್ಲ ಜೀವಿಗಳ ಮನವನ್ನು ಆತ ಮಥಿಸುತ್ತಾನೆ. ಈ ಭವ್ಯಮೂರ್ತಿಗೆ ಆ ದಿವ್ಯ ಲಾವಣ್ಯ ಹೇಗೆ ಬಂತು? ಶ್ರೀಮಾತೆಯ ಕಡೆಗಣ್ಣ ನೋಟದ ಫಲವಂತೆ!! ಈ ವಾತ್ಸಲ್ಯಮಯಿಯಾದ ಅನ್ನಪೂರ್ಣೆಯ ನಿವಾಸಸ್ಥಾನವೆಲ್ಲಿದೆ?

ಸುಧಾಸಿಂಧೋರ್ಮಧ್ಯೇ ಸುರವಿಟಪಿ
ವಾಟೀಪರಿವೃತೇ ಮಣಿದ್ವೀಪೇ
ನೀಪೋಪವನ ವತಿ ಚಿಂತಾಮಣಿ ಗೃಹೇ।
ಶಿವಾಕಾರೇ ಮಂಚೇ!!

ತಾಂತ್ರಿಕರು ಈ ಶ್ಲೋಕಕ್ಕೆ ವಿಚಿತ್ರವಾಗಿ, ವಿಶೇಷವಾಗಿ ಅರ್ಥಮಾಡಿದ್ದಾರೆ. ಭೈರವಾಮಳ, ವಾಮಕೇಶ್ವರ ಮಹಾತಂತ್ರ ಮುಂತಾದ ತಂತ್ರ ಶಾಸ್ತ್ರ ಗ್ರಂಥಗಳಲ್ಲಿ ದೇವೀ ಉಪಾಸನೆ ಸಮಯಾಚಾರ – ಕುಲಾಚಾರ ಎಂಬ ಎರಡು ರೀತಿಯಲ್ಲಿ ಮಾಡಬಹುದೆಂದು ಅಭಿಪ್ರಾಯ ಪಡಲಾಗಿದೆ. ಒಂದು ಅಂತರ ಪೂಜಾವಿಧಾನ. ಇನ್ನೊಂದು ಬಾಹ್ಯ ಪೂಜಾವಿಧಾನ.

ಶ್ರೀ ಸುಂದರೀ ಸಾಧನ ತತ್ಪರಾಣಾಂ
ಯೋಗಶ್ಚ ಭೋಗಶ್ಚ ಕರಸ್ಥ ಏವ

ಎಂದು ಫಲಶ್ರುತಿ ಏನೇ ಹೇಳಲಿ–ಅದು ದುರ್ಗಮ ಪಥವೆಂಬುದಂತೂ ಸತ್ಯ.

ಸಕಲ ವಿದ್ಯಾಸ್ವರೂಪಿಣಿಯಾದ, ಸಕಲ ಶಾಸ್ತ್ರ ಸಂಸ್ತೂಯಮಾನ ವಿಭವೆಯಾದ, ವೀಣಾ ಪುಸ್ತಕಧಾರಿಣಿ ಶಾರದೆ, ಹಿರಣ್ಯವರ್ಣಾಂ ಹರಿಣೀಂ–ಎಂದು ಶ್ರುತಿಗಳಲ್ಲಿ ಸ್ತುತಿಸಲಾಗಿರುವ ಕ್ಷೀರೋದಾರ್ಣವ ಸಂಭೂತೆ ಶ್ರೀ ಮಹಾಲಕ್ಷ್ಮಿ, ದಕ್ಷಾಧ್ವರ ವಿಧ್ವಂಸಿನಿಯಾದ ದಾಕ್ಷಾಯಿಣಿ, ಸಿಂಹವಾಹಿನಿಯಾಗಿ ಅಷ್ಟಭುಜಾಲಂಕೃತೆಯಾಗಿರುವ ಪ್ರಳಯಂಕರೀ ಶಕ್ತಿ ದುರ್ಗಿ ಹೀಗೆ ಚಿಚ್ಛಕ್ತಿ ನಾನಾ ರೂಪಧಾರಿಣಿಯಾಗಿದ್ದಾಳೆ.

ಶರಜ್ಜ್ಯೋತ್ಸ್ನಾಂಶುದ್ಧಾಂ
ಶಶಿಯುತ ಜಟಾಜೂಟ ಮಕುಟಾಂ
ವರತ್ರಾಸತ್ರಾಣ ಸ್ಫಟಿಕ
ಘಟಿಕಾ ಪುಸ್ತಕ ಕರಾಂ,
ಸಕೃನ್ನ ತ್ವಾ ನತ್ವಾ
ಕಥಮಿವ ಸತಾಂ ಸಂನಿದಧತೇ
ಮಧುಕ್ಷೀರ ದ್ರಾಕ್ಷಾ
ಮಧುರಿಮಧುರೀಣಾಃ ಫಣಿತಯಃ॥

ಶರದ ಚಂದ್ರನ ಕಿರಣಗಳ ಧಿಕ್ಕರಿಪ ಪದ ನೂಪುರದ, ಶುಕ್ಲವಸನ ಭೂಷಿತೆ ಶಾರದೆಯನ್ನು ಶ್ರದ್ಧಾ ಭಕ್ತಿಯಿಂದ ಒಂದು ಸಲವಾದರೂ ಸ್ಮರಿಸಿ ನಮಿಸದವರು, ಮಾಧುರ್ಯ ಪೂರ್ಣಕವಿತೆಯನ್ನು ಹೇಗೆತಾನೆ ರಚಿಸಲು ಸಾಧ್ಯ? ಜಗನ್ಮಾತೆಯ ಲಾವಣ್ಯ ಪೂರ್ಣ ಪ್ರೋಜ್ವಲ ದಿವ್ಯವ್ಯಕ್ತಿತ್ವವನ್ನು ಒಂದುಸಲವಾದರೂ ಧ್ಯಾನಿಸದವರು ವಾಗ್ವೈಖರಿಯನ್ನೂ, ವಾಗ್ವಿಲಾಸ ಪ್ರತಿಭೆಯನ್ನು ಹೇಗೆತಾನೆ ಪಡೆಯಲು ಸಾಧ್ಯ?

ಅರುಣಾಖ್ಯಾಂ ಭಗವತೀ
ಮರುಣಾಭಾಂ ವಿಚಿಂತಯೇತ್

ಎನ್ನುತ್ತದೆ ವಾಮಕೇಶ್ವರ ತಂತ್ರ. ಆಕೆಯ ಕೃಪಾಪೋಷಿತರೇ ಜಗತ್ತಿನ ಮಹಾಕವಿಗಳೆಲ್ಲರೂ ವಿದ್ವಾಂಸರೆಲ್ಲರೂ!! ಜಗಜ್ಜನನಿಯನ್ನು ಸ್ತುತಿಸಲು, ಸೂಕ್ತವಾದ ಮಾತುಗಳನ್ನು ಯಾರಿಂದ ಎರವಲು ಪಡೆಯುವುದು? ಅಕಾರಾದಿ ಕ್ಷಕಾರಾಂತ ವೈಖರೀವಾಕ್ ಸ್ವರೂಪಿಣಿ–ಎಂದು ಆಕೆಯನ್ನು ಕರೆಯಲಾಗಿದೆ. ಆಕೆಯೇ ಸೃಷ್ಟಿಸಿದ, ಆಕೆಯೇ ಪ್ರೇರೇಪಿಸಿದ, ಆಕೆಯೇ ಪ್ರಚೋದಿಸಿದ ಮಾತುಗಳಿಂದ ಆಕೆಯನ್ನೇ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಸ್ತುತಿಸಿ ಧನ್ಯರಾಗಬೇಕು. ಎಲ್ಲ ಸಾ
ಗಳನ್ನೂ ತಾನೇ ಸೃಷ್ಟಿಸಿ ಸಿದ್ಧಮಾಡಿಕೊ
ಉಪಯೋಗಿಸಿಕೊಳ್ಳುವ ಬುದ್ಧಿ ಶಕ್ತಿಯ
ಅನುಗ್ರಹಿಸಿ, ಈ ಕೆಲಸವಮಾಡಿ ಧನ್ಯನಾ
ಎನ್ನುವ ಆಕೆಯ ಕರುಣೆ, ವಾತ್ಸಲ್ಯ ಜಗ
ಆಧಾರವಾಗಿದೆ. ತಾನೇ ಮಗುವಿಗೆ ಮ
ಕಲಿಸಿ, ಆ ಮಗು ತೊದಲು ನುಡಿಯಿಂದ ಬ
ಬೆಪ್ಪಾಗಿ ಮಾತಾಡಿದಾಗ, ತಾನೇ ಕೇಳಿ ಹಿಗ
ತಾಯಿಯ ವಾತ್ಸಲ್ಯವಿದು. ಅದ್ದರಿಂದಲೇ

ತ್ವದೀಯಾಭಿರ್ವಾಗ್ಭಿಸ್ತವ ಜನನಿ
ವಾಚಾಂ ಸ್ತುತಿರಿಯ

ಎಂದಿದ್ದಾರೆ. ಕಾಳಿದಾಸನ ರಚನೆ ಎ
ಹೇಳಲಾಗುವ "ಲಘುಸ್ತವ"ದಲ್ಲಿ ಒ
ಮಾತಿದೆ–

ಯೇ ತ್ವಾಂ ಅಂಬ ನ ಶೀಲಯಂತಿ ಮನು
ತೇಷಾಂ ಕವಿತ್ವಂ ಕುತಃ ?

ವಾಗ್ರೂಪಿಣಿಯಾದ ಆಕೆಯನ್ನು ಯ
ಧ್ಯಾನಿಸುವುದಿಲ್ಲ; ಅವರಿಗೆ ಕಾವ್ಯ ರಚನಾ
ಹೇಗೆ ಬಂದೀತು ?? ಯಾರು ಆಕೆಯ ಕೃ
ದೃಷ್ಟಿಗೆ ಪಾತ್ರರಾಗಿದ್ದಾರೆ, ಅಂತಹ
ಬಾಯಿಂದ ಕವಿತೆ–ಸುರಸರಿತ್ಕಲ್ಲೋಲಲೋಲ
ರ್ಮಿವತ್–ತರಂಗ ಮಂಗಳಗಂಗೆಯ ವೀಚಿವಿಲ
ದಂತೆ – ಪ್ರವಹಿಸುತ್ತದೆ. ಸೌಂದರ್ಯಲಹ
ಹೋಲಿಸಲು ಮತ್ತೊಂದು ರಚನೆ ಇಲ್ಲ. ಸಾ
ಸ್ಸಾಗರೋಪಮಃ–ಎಂಬಂತೆ ಅದಕ್ಕದೇ ಸರಿಸಾ

ಸೌಂದರ್ಯಲಹರಿಯ ತಾಂತ್ರಿಕ ಮಹತ್ವವ
ಕುರಿತು ಬರೆದರೆ, ಅದೊಂದು ಸುದೀರ್ಘ ಪ್ರಬ
ವಾದೀತು. ಶತಶ್ಲೋಕಗಳಿಂದ ಕೂಡಿದ
ಗ್ರಂಥಕ್ಕೆ ಪ್ರವರಸೇನನ ಸುಧಾವಿದ್ಯೋ
ಕೈವಲ್ಯಾಶ್ರಮಿಯ ಸೌಭಾಗ್ಯವರ್ಧಿನಿ, ಲಕ್ಷ್ಮಿ
ಧರನ ಲಕ್ಷ್ಮೀಧರವ್ಯಾಖ್ಯಾ, ಸಹಜಾನಂದೀ
ವ್ಯಾಖ್ಯಾ, ಡಿಂಡಿಮವ್ಯಾಖ್ಯಾ...... ಇತ್ಯಾ
ವ್ಯಾಖ್ಯಾನ ಗ್ರಂಥಗಳು ಹೇರಳವಾಗಿವೆ.

ಋಗ್ವೇದದ ದೇವೀಸೂಕ್ತದಲ್ಲಿ ಒಂ
ಮಾತಿದೆ–

ಯಂ ಕಾಮಯೇ ತಂ ತಮುಗ್ರಂ ಕೃಣೋ
ತಂ ಬ್ರಹ್ಮಾಣಂ, ತಂ ಋಷಿಂ,
ತಂ ಸುಮೇಧಾವ

ಭವತಾರಿಣಿಯ ಕೃಪೆಗೆ ಪಾತ್ರನಾದವನು ಬ್ರ
ವರ್ಚಸ್ವಿ, ಋಷಿ, ಹಾಗೂ ಮಹಾಮೇಧಾ
ಎಲ್ಲವೂ ಆಗುತ್ತಾನೆ. ಯಾರ ಸೌಂದರ್ಯಲ
ಕವಿವಾಣಿಯಾಗಿ ಪ್ರವಹಿಸಿದೆ, ಆ ಜಗನ್ಮಾ
ಯನ್ನೇ ಬೇಡಿಕೊಳ್ಳುವುದು ಸೂಕ್ತ–

ಅವತು ಮಾಂ ಅವತು ವಕ್ತಾರಂ –ಎಂದು.



(6 ನೇ ಪುಟದಿಂದ)

ಹೆಜ್ಜೆಗಳಿಗೆ ಅನುಸಾರವಾಗಿ ಸಾಮರಸ್ಯ ಸೌಂದರ್ಯದಿಂದ ಜತೆಗೂಡಿದ ಜತಿ ಪೆಟ್ಟುವ ವಿಧಾನ ಕಣ್ಣಿಗಷ್ಟೇ ಅಲ್ಲ ಕಿವಿಗೂ ಇಂಪಾಗುವಂತೆ ರಚನೆಗೊಂಡಿದೆ.

ರಾಸಕ್ರೀಡೆ ಮುಗಿದು ಗೋಪಿಯರೊಂದಿಗೆ ಸುಖ ಸಂಕಥಾ ವಿನೋದದಿಂದಿದ್ದಾಗಲೇ ಕೃಷ್ಣ ಅದೃಶ್ಯನಾಗುತ್ತಾನೆ. ಆಗ ಕೃಷ್ಣನ ವಿರಹದಿಂದ ತೊಳಲಾಡಿದ ಗೋಪಿಯರು ಕೃಷ್ಣ ಚೇಷ್ಟಿತ ಅನುಸರಿಸಿ, ಸ್ಮರಿಸಿಕೊಳ್ಳುತ್ತ ವಿರಹತಾಪವನ್ನಡಗಿಸಲು ಪ್ರಯತ್ನಿಸಿ ವಿಫಲರಾಗಿ ದಣಿದು ಮರಗಳ ನೆರಳಿನಲ್ಲಿ ವಿಶ್ರಮಿಸುತ್ತಿರುವಾಗ ಒಮ್ಮೆಲೇ ಶೃಂಗಾರ ರಸಾಬ್ಧಿ ಮೇಲೆ ಕವಿದಂತೆ "ಎಳ್ತಂದ ನಾಬ್ಜೇಕ್ಷಣಂ" ಎಂದು ಕವಿ ಬಣ್ಣಿಸುತ್ತಾನೆ. ಈ ರೀತಿ ಒಮ್ಮೆಲೆ ಕಂಡ ಶೃಂಗಾರ ನಿಧಿ ಶ್ರೀಕೃಷ್ಣನ ಮೇಲೆ ಅತಿ ಪ್ರಣಯ ಕುಪಿತೆಯರಾದ ಆ ಗೋಪಿಕೆಯರೆಲ್ಲ ಸಂತೋಷದಿಂದ ಮುಗಿ ಬೀಳಲು "ಸರಸಾಲೋಕನದಿಂ ವಚನ ರಚನೆಯಿಂ, ಹಸ್ತಾಕಮಲ ಸಂಸ್ಪರ್ಶದಿಂ, ಅಂಬುರುಹೇಕ್ಷಣಂ ಪ್ರಸನ್ನ ಅಚರಿತೆಯರಪ್ಪಂತೆ ಮಾಡಿದ. ಗೋಪಿಯರಂ" ಎಂದು ಸೊಗಸಾದ ಪ್ರಣಯ ಪ್ರಸಂಗದಿಂದಲೇ ಮುಕ್ತಾಯಗೊಳಿಸುತ್ತಾನೆ.

ಜಗನ್ನಾಥ ವಿಜಯದ ಈ ಶೃಂಗಾರ ರಸಮಯ ಸನ್ನಿವೇಶವನ್ನು ಓದಿ ಮುಗಿಸಿದಾಗ ವಿಷ್ಣು ಪುರಾಣದ ಆ ರೇಖಾಚಿತ್ರವೆಲ್ಲಿ? ರುದ್ರಭಟ್ಟನ ಈ ನಯನ ಮನೋಹರ ಚಲನಚಿತ್ರ ಸದೃಶ ಶಬ್ದ ಕಾವ್ಯ ರಚನೆಯೆಲ್ಲಿ? ಎಂದೆನಿಸುವುದು ಸಹಜ.

'ಜಗನ್ನಾಥ ವಿಜಯ'ದ ಇನ್ನೊಂದು ರಸಘಟ್ಟ ಪಾರಿಜಾತದ ಹರಣ ಪ್ರಸಂಗ. ಇದು ಶೃಂಗಾರ ಹಾಸ್ಯ ವೀರಾದ್ಭುತ – ಈ ನಾಲ್ಕು ರಸಗಳ ಚತುರ್ವರ್ಣರಂಜಿತಕಾರಂಜಿಗಳ ಬೃಂದಾವನವೇ ಆಗಿದೆಯೆನ್ನಬಹುದು. ಸತ್ಯಭಾಮೆಯ ಅಪೇಕ್ಷೆಯ ಮೇರೆಗೆ ಇಂದ್ರನ ವನದಲ್ಲಿದ್ದ ಪಾರಿಜಾತವನ್ನು ಕಿತ್ತುಕೊಳ್ಳುತ್ತಾನೆ ಶ್ರೀಕೃಷ್ಣ, ವನಪಾಲಕರು ಇಂದ್ರನಿಗೆ ಈ ವಿಷಯ ತಿಳಿಸಲು ಅವನು ದೇವತೆಗಳ ಸಹಿತವಾಗಿ ಕೃಷ್ಣನೊಂದಿಗೆ ಯುದ್ಧಕ್ಕೆ ಹೊರಡುತ್ತಾನೆ. ದೇವತೆಗಳು ಆ ಯುದ್ಧದಲ್ಲಿ ಸೋತು, ಇಂದ್ರ ಪಲಾಯನ ಮಾಡುತ್ತಾನೆ. ಕೃಷ್ಣ ಪಾರಿಜಾತವನ್ನು ಕಿತ್ತ ಸ್ಥಳದಲ್ಲೇ ನೆಡಲು ಹೋದಾಗ ಇಂದ್ರ ಅದನ್ನು ಕೃಷ್ಣನಿಗೇ ಅರ್ಪಿಸುತ್ತಾನೆ. ಕೃಷ್ಣ ಅದನ್ನು ಸತ್ಯಭಾಮೆಗೆ ಕೊಡುತ್ತಾನೆ – ಇದು ವಿಷ್ಣುಪುರಾಣದ ಕಥಾಬೀಜ. ಇದನ್ನು ರುದ್ರಭಟ್ಟ ತನ್ನ ಕಾವ್ಯರೂಪದಲ್ಲಿ ಘಟ್ಟ ಇಳಿಸಿದ್ದಾನೆ. ಕೆಲವು ಹೊಸ ಸನ್ನಿವೇಶಗಳನ್ನು ಪಾತ್ರಗಳನ್ನು, ಕಥಾವಿವರಗಳನ್ನು ಕಲ್ಪಿಸಿದ್ದಾನೆ. ಇದರ ಮೊದಲ ಭಾಗದಲ್ಲಿ ಕವಿಯು ನಾರದನ ಕಲಹ ತೃಷ್ಣೆಯ ಸ್ವಭಾವವನ್ನು ಬಹುಕೌಶಲದಿಂದ ಚಿತ್ರಿಸಿದ್ದಾನೆ. ಆತನ ಚುರುಕುಹಾಲಿಗೆ ಸತ್ಯಭಾಮೆಯ ಮುನಿಸಿಗೆ ಕಾರಣವಾಗಿ, ಆಕೆಯನ್ನು ಸಮಾಧಾನಗೊಳಿಸುವುದಕ್ಕಾಗಿ ಇಂದ್ರನ ನಂದನದಿಂದ ಪಾರಿಜಾತ ತರುವನ್ನೇ ತಂದೀಯುವುದಾಗಿ ಶ್ರೀಕೃಷ್ಣ ಪ್ರತಿಜ್ಞೆ ತೊಡುವಂತೆ ಪ್ರಭಾವ ಬೀರುತ್ತದೆ. ಇಂದ್ರ – ಉಪೇಂದ್ರರಿಗೆ ಯುದ್ಧವಾಗಿ, ಉಪೇಂದ್ರನಿಗೆ ಜಯಲಭಿಸಿ, ಶ್ರೀಕೃಷ್ಣನ ಮಹಿಮೆಯನ್ನು ಲೋಕಕ್ಕೆಲ್ಲ ತೋರುವುದೇ ನಾರದ ಮುನಿಯ ಅಂತಿಮ ಧ್ಯೇಯವಾಗಿದೆ. ಈ ಧ್ಯೇಯ ಸಾಧನೆಯಲ್ಲಿ ಸವತಿ ಮಾತ್ಸರ್ಯ, ಗಂಡಹೆಂಡಿರ ಪ್ರೇಮ ಕಲಹ, ಪಿಸುಣರ ನಡೆ–ನುಡಿಗಳ ಪ್ರಭಾವ –ಇತ್ಯಾದಿ ಕೌಟುಂಬಿಕ ಚಿತ್ರಗಳು ಆನುಷಂಗಿಕವಾಗಿ ಬಂದಿದ್ದು, ವಾಸ್ತವತೆಯ ಜೀವಕಳೆಯಿಂದ ತುಂಬಿದೆ.

ಪಾರಿಜಾತಹರಣದ ಎರಡನೇ ಭಾಗದಲ್ಲಿ ಕೃಷ್ಣ – ನಾರದರ ಹಾಗೂ ಇಂದ್ರ, ನಾರದರ ಸಂವಾದ, ದೇವೇಂದ್ರ–ಉಪೇಂದ್ರರ ಸಂಗ್ರಾಮ ಶಚೀದೇವಿ–ಸತ್ಯಭಾಮೆಯರ ಸರಸ ವಾಗ್ವಾದ– ಇವು ಹಾಸ್ಯ, ವೀರ, ಅದ್ಭುತರಸಗಳಿಂದ ತುಂಬಿದ ನಾಟಕೀಯ ದೃಶ್ಯಗಳೇ ಆಗಿವೆ.

ಈ ಮೊದಲೇ ತಿಳಿಸಿರುವಂತೆ ಜಗನ್ನಾಥ ವಿಜಯದಲ್ಲಿಯ ರಸ ನಿರೂಪಣೆಯ ಗುರಿ ಶ್ರೀಕೃಷ್ಣ ಭಕ್ತಿ, ವಿಷ್ಣು ಪಾರಮ್ಯ ತತ್ತ್ವವನ್ನು ಸಹೃದಯರಿಗೆ ಹೃದ್ಯವಾಗುವಂತೆ ನಿರೂಪಿಸುವುದೇ ಆಗಿದೆ. ಬ್ರಹ್ಮ – ಬೃಹಸ್ಪತಿಗಳು, ಭೂದೇವಿ, ನಾರದ, ವಸುದೇವ, ದೇವಕಿಯರು, ದೇವೇಂದ್ರ, ಕಾಳೀಯ ಸರ್ಪ, ನಾಗಸ್ತ್ರೀಯರು, ಅಕ್ರೂರ ಗೋಪಿಕಾಸ್ತ್ರೀಯರು ಮುಚಕುಂದ, ಅದಿತಿ– ಇವರೇ ಮೊದಲಾದವರು ಆಯಾ ಸಂದರ್ಭಗಳಲ್ಲಿ ಮಾಡುವ ಶ್ರೀಕೃಷ್ಣ ಸ್ತುತಿಯಲ್ಲಿ ವಿಷ್ಣು ಪಾರಮ್ಯ ತತ್ತ್ವವನ್ನು ಸಮೀಕರಿಸಿ ಹೊಗಳುವ ಕವಿಯ ರೀತಿ–ಭಕ್ತಿರಸಕ್ಕೆ ಉತ್ತಮ ಉದಾಹರಣೆಯಾಗಿದೆ.

ಕವಿಯು ಭಕ್ತಿನಿಷ್ಠನಾಗಿದ್ದರೂ, ಶ್ರೀಕೃಷ್ಣನು ರಾಕ್ಷಸಾಧಮರನ್ನು ಒರೆಸಿ, ಭೂಭಾರವನ್ನು ಇಳುಹುವ ಮಹೋದ್ಯೋಗದಲ್ಲಿ ತೊಡಗುವುದರಿಂದ, ಆಗ ನಡೆಸುವ ಆತನ ನೂರೊಂದು ಕೃತ್ಯಗಳಲ್ಲಿ ರುದ್ರಭಟ್ಟಕವಿ ಸ್ವಾಭಾವಿಕವಾಗಿಯೇ ವೀರಾದ್ಭುತ ರಸಗಳನ್ನು ಕೈಸಿದ್ದಾನೆ. ಶ್ರೀಕೃಷ್ಣಾವತಾರದ ಮುನ್ನವೇ ಬ್ರಹ್ಮಾದಿ ದೇವತೆಗಳಿಗೆ ಮಹಾವಿಷ್ಣು "ಸುತನಪ್ಪೆಂ ದೇವಕಿಗಾಂ। ಕಪತಿಯುದಿನಂ ಒಲ್ದು ರಮಿಯಿಪೆ ಗೋಕುಲದೊಳ್। ದಿತಿಸುತರಂ ಕಂಸಾದ್ಯರಂ। ಅತಿಬಲ ರಂ ಕೊಲ್ಲೆ ಇಳಿಪುವೆಂ ಭೂಭಾರಮಂ।" ಎಂದು ವೀರಾವೇಶದಿಂದ ಗರ್ಜಿಸಿ ವೀರರಸದ ಪ್ರಥಮ ಹೊನಲನ್ನು ಹರಿಸುತ್ತಾನೆ.

ಈ ರೀತಿ ಪ್ರಾರಂಭಗೊಂಡ ವೀರರಸದ ಪರಿಣಾಮ ಕಂಸವಧೆಯ ದೃಶ್ಯದಲ್ಲಿಂತೂ ಶಿಖರಾಗ್ರ ತಲುಪುತ್ತದೆ. ಕೃಷ್ಣನ ವೀರಾವೇಶಕ್ಕೆತಕ್ಕಂತೆ ರುದ್ರಭಟ್ಟನ ರಸಾವೇಶ ಹೊಮ್ಮಿದೆ. ಕಂಸನು ಕುಳಿತಿದ್ದ ಎತ್ತರದ ಕಂಬದ ತುದಿಯ ಮೇಲಿದ್ದ ಕರುವಾಡ ಪೀಠಕ್ಕೆ ಸಿಂಹದಂತೆ ನೆಗೆದ ಶ್ರೀಕೃಷ್ಣ, ಆತನನ್ನು ಮಲ್ಲಕಣಕ್ಕೆ ಎತ್ತಿಕ್ಕಿ, ಆತನ ಮೇಲೇರಿ ಕುಳಿತು ಕಂಸರಾಕ್ಷಸನ ಪ್ರಾಣ ತೆಗೆದ. "ಪ್ರಕಟಂ ಸಿಂಹಸ್ಫುರಲ್ಲಂಘನ ಮೆಸೆಯೆ, ತವಂಗಕ್ಕೆ ಧೀಂಕಿಟ್ಟು ಕೃಷ್ಣಂ ಮಕುಟಾಸ್ಫಾಲನಂಗೈಯಲ್ಕ್, ಎಲೆಲೆ, ರವಿಯಂ ಆ ರಾಹು ಈಂಟಿತ್ತು ಎನಲ್ ಕೌತುಕಮಾಯ್ತು–ಎಂದು ಅಭ್ರದೊಳ್ ಬೊಬ್ಬಿರಿಯೆ ದಿವಿಜರ್, ಆ ಮಾಡದಿಂ ಕಂಸನಂ ಮಲ್ಲಕಣಕ್ಕೆ ಎತ್ತಿಕ್ಕಿ ತಾಂ ಮೇಲೆರಗಿದಂ, ಎರಗಲ್ ಸ್ವರ್ಗದಿಂ ಪುಷ್ಪವೃಷ್ಟಿ". ಹೀಗೆ ಮೇಲೆರಗಿದ ಕೃಷ್ಣ ಕಂಸನನ್ನು ತುಳಿದು ಆತನ ಅಸುವನ್ನು ತೆಗೆದ. ಅದರೊಡನೆ ಆತನ ಮೇಲಣ ಮುಳಿಸನ್ನು ತೆಗೆದ!

ಕಂಸವಧೆಯವರೆಗೆ ನಡೆದ ಕೃಷ್ಣನ ಬಾಲ್ಯದ ಸಾಹಸಕೃತ್ಯಗಳದ್ದು ಮೊದಲನೇ ಘಟ್ಟವಾದರೆ, ಕೃಷ್ಣ ಪ್ರೌಢಾವಸ್ಥೆಗೆ ಬಂದನಂತರದಲ್ಲಿ ಜರಾಸಂಧ, ಸೃಗಾಲ, ಕಾಲಯವನ, ದಂತವಕ್ರ, ನರಕಾಸುರ, ಶಿಶುಪಾಲ, ಬಾಣಾಸುರ, ಮೊದಲಾದ ರಾಕ್ಷಸರೊಂದಿಗೆ ನಡೆಸಿದ ಘನ ಘೋರ ಯುದ್ಧಗಳ ವರ್ಣನೆಗಳಲ್ಲಿ ರುದ್ರಭಟ್ಟ ಕಣ್ಣಾರೆ ಕಂಡಿರಬಹುದಾದ, ಸ್ವತಃ ಅನುಭವಿಸಿರಬಹುದಾದ ಹೊಯ್ಸಳರ ಕಾಲದ ವೀರರ ರಣೋತ್ಸಾಹದ ವಾತಾವರಣ ಪ್ರತಿಬಿಂಬಿತವಾಗಿದೆ.

ರುದ್ರಭಟ್ಟ ಹುಟ್ಟು ಕವಿ; ಕನ್ನಡದತ್ತ ಅಷ್ಟೊಂದು ಗಮನೀಯದ ಅಂದಿನ ಕಾಲದಲ್ಲಿ ರುದ್ರಭಟ್ಟ ಸಂಸ್ಕೃತ–ಕನ್ನಡಗಳೆರಡನ್ನು ಆಳವಾಗಿ ಅಭ್ಯಸಿಸಿ ಮಹಾಕಾವ್ಯ ರಚಿಸಿದ್ದು ನಿಜವಾಗಿಯೂ ಗಮನೀಯವಾದದ್ದು. ತನ್ನ ಹುಟ್ಟಿನಿಂದ ಪಡೆದ ಕಾವ್ಯಸಂಸ್ಕಾರ, ಶೀಲ ಸ್ವಭಾವಗಳನ್ನೇ ಕಾವ್ಯಶೈಲಿಯಾಗಿಸಿಕೊಂಡು, ಆಗಿನ ಕಾಲದ ಸಾಹಿತ್ಯ ಪ್ರಜ್ಞೆಗೆ ತಕ್ಕದಾಗಿ ಚಂಪೂರೂಪದಲ್ಲಿ ತನ್ನ ಕಾವ್ಯ ಸತ್ತ್ವದ ನಿರಕಹೊಯ್ದು, ತನ್ನ ಅಧಿದೈವವೆನಿಸಿದ ಕೃಷ್ಣನ ಶಬ್ದಚಿತ್ರ ಸೃಷ್ಟಿಸಿದ ಕವಿ ರುದ್ರಭಟ್ಟ, ಕನ್ನಡ–ಸಂಸ್ಕೃತ ಶಬ್ದ ಭಂಡಾರವನ್ನೇ ಸೂರೆಗೈದು ವೃತ್ತಾನುಪ್ರಾಸ, ಛೇಕಾನುಪ್ರಾಸ, ಯಮಕ–ಮುಂತಾದ ಶಬ್ದಾಲಂಕಾರಗಳನ್ನು, ಪರಿಸಂಖ್ಯೆ, ವಿರೋಧಾಭಾಸ, ಶ್ಲೇಷ, ರೂಪಕ–ಉಪಮೆ ಮುಂತಾದ ಅರ್ಥಾಲಂಕಾರ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| | (ರೂ 6–00 ಶುಲ್ಕದಿಂದ 4 ಮಂದಿಗೆ ಅನುಮತಿ) | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–00 ರಿಂದ 6–30 |
| ಸರ್ವದರ್ಶನ | ,, 5–45 ರಿಂದ 7–00 | ,, 6–30 ರಿಂದ 11–30 |
| ನಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| | ( ರೂ 100/- ಶುಲ್ಕದಿಂದ ಒಬ್ಬರಿಗೆ ಅನುಮತಿ ) | |
| | (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 2/–ಶುಲ್ಕ) | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 11–30 ರಿಂದ 12–00 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 12–30 ರಿಂದ 6–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/-) | — |
| ರಾತ್ರಿ ಗಂಟೆ | ರಾತ್ರಿ ?–00 ರಿಂದ 8–30 | ರಾತ್ರಿ ?–00 ರಿಂದ 6–30 |
| ಸರ್ವದರ್ಶನ | — | ,, 6–30 ರಿಂದ 9–15 |
| ಏಕಾಂತಸೇವೆ | ,, 8–30 ರಿಂದ 9–00 | ,, 9–15 ರಿಂದ 9–30 |

**ಪೇಷ್ಕಾರ್.**

ಗಳನ್ನು ಬಳಸಿ, ಕಾವ್ಯವನ್ನು "ರೀತಿ–ಚೋ(
ಚಮತ್ಕೃತಿ–ಯುಕ್ತಂ' ಎನ್ನುವಂತೆ ಮಾಡಿದ

ರುದ್ರಭಟ್ಟನ ಶೈಲಿ ಸಂಸ್ಕೃತಭೂಯಿಷ್ಠ ವೇ( ಕಬ್ಬಿಣದ ಕಡಲೆಯೆಂದೂ ಕೆಲವರು ಹೇ( ವುಂಟು. ಇದಕ್ಕೆ ಕಾರಣ ಅತನ ಕಾ( ಪ್ರಾರಂಭದ ಐದುಃಪದ್ಯಗಳು. ಸಂಸ್ಕೃತ ವಿದ ಕರೇ ಅವುಗಳನ್ನು 'ಪಂಚ–ಪಾಷಾಣ' ಗಳೆ ಕರೆದಿದ್ದಾರೆ. ಇವುಗಳನ್ನು ಬಿಟ್ಟರೆ ಉಳಿದ( ಗಳೆಲ್ಲ ಸರಳ ಸಂಸ್ಕೃತ ಮತ್ತು ತಿರುಳ್ಗನ್ನಡ ಗಳಿಂದ ಕೂಡಿದವುಗಳು. ಚಂಪೂಕಾವ್ಯ ಸ( ದಾಯಕ್ಕನುಗುಣವಾಗಿ ರುದ್ರಭಟ್ಟ ಹದಿನೆ( ವರ್ಣನೆಗಳನ್ನು ತನ್ನ ಕಾವ್ಯದಲ್ಲಿ ತಂದಿದ್ದ ಅವುಗಳನ್ನು ಹಿತಮಿತವಾಗಿ ಬಳಸಿಕೊ( ಕತೆ ಮರೆಯಾಗದಂತೆ ಔಚಿತ್ಯ ಪ್ರ( ಮೆರೆದಿದ್ದಾನೆ.

ಇಂಥ ಕವಿ ತನ್ನ ಹಿಂದಿನ ಕವಿಗಳಿಂದ ಪ್ರ( ವಿತನಾದಂತೆ ಸ್ವಯಂ–ಪ್ರತಿಭಾ ಪ್ರಭೆಯ ಮುಂದಣ ಕವಿಗಳ ಮೇಲೂ ಹರಡಿದ್ದಾ( ದೇವರಸ, ಚೌಂಡರಸ, ಮಲ್ಲಿಕಾರ್ಜುನ, ಸಾ( ಭಟ್ಟಾಕಳಂಕ, ಷಡಕ್ಷರರಂಥ ಕವಿಗಳು ಈ( ಕಾವ್ಯದಿಂದ ಪ್ರಭಾವಿತರಾಗಿದ್ದಾರೆ. ಅಷ್ಟೇ ( ಶ್ರೀಕೃಷ್ಣ ಭಕ್ತಿಯನ್ನು ಮೈದುಂಬಿ ಹಾಡಿ ಕೊಂ( ಡಿದ ಮಹಾಕವಿಗಳಾದ ಕುಮಾರವ್ಯಾಸ, ಲಕ್ಷ್ಮಿ( ಶರು, ಹರಿಭಕ್ತಿಗೆ ತಮ್ಮ ಜೀವನವನ್ನೇ ಮು( ಪಾಗಿಟ್ಟ ಪುರಂದರದಾಸರು–ಕನಕದಾಸರು ಈ( 'ಜಗನ್ನಾಥ ವಿಜಯ'ದ ಪ್ರಭಾವಲಯದಲ್ಲಿ ಸಿ( ವರೇ ಎಂದು ಹೇಳಿದರೆ ಅತಿಶಯೋಕ್ತಿಯಾ( ಲಿಕ್ಕಿಲ್ಲ. ಒಟ್ಟಿನಲ್ಲಿ ಶ್ರೀಕೃಷ್ಣನ ಅವತಾರಲೀ( ಗಳನ್ನು ತನ್ನ ಶಬ್ದಶಿಲ್ಪದಲ್ಲಿ ಅಸದೃಶವಾ( ಕಡೆದಿರಿಸಿದ ಭಕ್ತಕವಿ ರುದ್ರಭಟ್ಟನೆನ್ನಬಹುದ ವಿಶಾಲಾರ್ಥದ ವಿಷ್ಣು ಭಕ್ತಿಯ ಉದಾತ್ತ ಸಂದೇ( ವನ್ನು ರಸಾರ್ದ್ರ ಹೃದಯಕ್ಕೆ ಮುಟ್ಟಿಸುವುದ ಈ ಕಾವ್ಯದ ಗುರಿ–ಅದನ್ನು ಸಾಧಿಸಿದ ಪರಂ( ಸಾಧಕ ರುದ್ರಭಟ್ಟ. ಇಂತಹ ಸುಕವೀಂದ್ರನನ ಪಡೆದ ಕನ್ನಡ ನಾಡು–ಸಾಹಿತ್ಯ ನಿಜಕ್ಕೂ ಧನ ವೆನ್ನಬಹುದು.



## ಕಿಶೋರಜಗತ್

# ಚಿನ್ನದ ಚಕ್ರ

ನೂರಾರು ವರ್ಷಗಳ ಹಿಂದೆ ಪುರಿಯಲ್ಲಿ ಬಡಮನುಷ್ಯನೊಬ್ಬ ವಾಸಿಸುತ್ತಿದ್ದ. ಅವನಿಗೆ ತನ್ನ ಮಗಳ ಮದುವೆಯ ಚಿಂತೆ ಹತ್ತಿತ್ತು. ತುಂಬ ಕಷ್ಟಪಟ್ಟು ಒಳ್ಳೇ ವಂಶದ ಯೋಗ್ಯ ಹುಡುಗನನ್ನು ಆರಿಸಿದ. ಆದರೆ ಮದುವೆಮಾಡಲು ಬೇಕಾಗುವಷ್ಟು ಹಣ ಅವನ ಬಳಿಯಿರಲಿಲ್ಲ.

ಹಣ ಎಲ್ಲಿಂದ ಬರಬೇಕು? ಎಷ್ಟು ಯೋಚಿಸಿದರೂ ಅವನ ಸಮಸ್ಯೆ ಬಗೆ ಹರಿಯಲಿಲ್ಲ. ಕಟ್ಟ ಕಡೆಗೆ ಆತ ಭಗವಾನ್ ಜಗನ್ನಾಥನ ಮೊರೆಹೊಕ್ಕ. ಹಸಿವುನೀರಡಿಕೆಯ ಪರಿವೆಯಿಲ್ಲದೆ ಜಗನ್ನಾಥಮಂದಿರದ ಬಾಗಿಲಲ್ಲಿ ಬಿದ್ದು ಕೊಂಡ. ಅವನ ಭಕ್ತಿಗೆ, ದೇವ ಪ್ರಸನ್ನನಾದ. ಮೂರನೇದಿನ ಆತ ಕನಸಿನಲ್ಲಿ ಕಾಣಿಸಿಕೊಂಡು ವರ ಬೇಡು ವಂತೆ ಹೇಳಿದ. "ನನ್ನ ಮಗಳ ಮದುವೆಗೆ ಸಾಕಾಗುವಷ್ಟು ಹಣ ಕರುಣಿಸಿರಿ"-ಎಂದು ಗದ್ಗದ ಕಂಠದಿಂದ ಬೇಡಿದ ಆ ಮನುಷ್ಯ.

"ದಿನಾಲೂ ರಾತ್ರಿ ೧೨ ಗಂಟೆಗೆ ಲಂಕಾಧಿಪತಿ ವಿಭೀಷಣ ರಥವೇರಿ ನನ್ನ ದರ್ಶನಕ್ಕೆ ಬರುವ. ನಾಳೆ ನೀನು ಅವನಿಂದ ಏನಾದರೂ ಬೇಡಿ ಪಡೆದುಕೋ"-ಎಂದ ಭಗವಂತ.

ಮರುದಿನ ರಾತ್ರಿ ೧೨ ಗಂಟೆಯಾಗುತ್ತಲೇ ಆ ಮನುಷ್ಯ ದೇವಾಲಯಕ್ಕೆ ಬಂದ. ಆತ ಬಾಗಿಲಲ್ಲಿ ಕಾಲುಚಾಚಿ ಕುಳಿತ. ಅದುವರೆಗೆ ವಿಭೀಷಣ ದೇವಾಲಯದ ಒಳಗಿದ್ದ. ದೇವದರ್ಶನ ಪಡೆದು ಮರಳಿದಾಗ ಬಾಗಿಲಲ್ಲಿ ಮನುಷ್ಯ ಸಿಕ್ಕಿದ. ಅವನನ್ನು ದಾಟದೆ ಈಚೆ ಬರುವಂತಿಲ್ಲ. ದಾರಿ ಬಿಡುವಂತೆ ವಿಭೀಷಣ ವಿನಂತಿಸಿದ. ಆಗ ಮನುಷ್ಯ ತನ್ನ ಕನಸಿನ ಸಂಗತಿ ಹೇಳಿದ "ಈಗ ನನ್ನ ಬಳಿ ಏನೂ ಇಲ್ಲ. ಅದರೂ, ನಿನಗೆ ಸಹಾಯವಾಗುವಂತೆ ಏನಾದರೂ ಕೊಟ್ಟು ಹೋಗುವೆ" -ಎಂದ. ಆತ ಲಂಕೆಯಿಂದ ಚಿನ್ನದ ರಥದಲ್ಲಿ ಬರುತ್ತಿದ್ದ. ಹೀಗಾಗಿ ರಥದ ಹಿಂದು ಚಕ್ರ ಕೊಟ್ಟು-ಇಗೋ ಇನ್ನು ನಿನ್ನ ಏಳು ತಲೆಮಾರಿಗೆ ಹಣದ ಕೊರತೆ ಉಂಟಾಗದು'-ಎಂದು ಹೊರಟು ಹೋದ.

ಈಗ ಆ ವ್ಯಕ್ತಿಗೆ ಹೊಸ ಸಮಸ್ಯೆ ಎದುರಾಯಿತು. ಚಕ್ರ ಬಹಳಷ್ಟು ಭಾರವಿದ್ದುದರಿಂದ ಒಬ್ಬನೇ ಅದನ್ನೆತ್ತಿ ಒಯ್ಯುವಂತಿಲ್ಲ. ಏನು ಮಾಡಲೂ ತೋಚದೆ ಸುಮ್ಮನೆ ಕುಳಿತು ಕೊಂಡ, ನೋಡುತ್ತಿದ್ದಂತೆಯೇ ಬೆಳಗಾಯಿತು. ಅರ್ಚಕರೂ ಇತರ ಜನರೂ ದೇವಾಲಯಕ್ಕೆ ಬಂದರು. ಬಂಗಾರದ ಚಕ್ರ ಕಂಡಜನ ನಾಮುಂದು ತಾಮುಂದು-ಎಂದು ಅದನ್ನು ಕಸಿದು ಕೊಳ್ಳಲು ಬಂದರು. ಅವರಲ್ಲೇ ಜಗಳವುಂಟಾಯಿತು. ಚಕ್ರ ಎತ್ತುವವನೇ ಅದರ ನಿಜವಾದ ಅಧಿಕಾರಿ-ಎಂದು ಎಲ್ಲರೂ ತೀರ್ಮಾನಿಸಿದರು.

ಈಗ ಮಹಾಮಹಾ ಜಟ್ಟಿಗಳು ಮುಂದೆ ಬಂದು ಚಕ್ರ ಎತ್ತಲು ಪ್ರಯತ್ನಿಸಿದರು. ಆದರೆ ಹಿಂದಿಂಚು ಸರಿಸಲೂ ಅವರಿಂದಾಗಲಿಲ್ಲ. ಇತ್ತ ಆ ಬಡಮನುಷ್ಯ ಚಿಂತಿತನಾಗಿ ಕುಳಿತಿದ್ದ. ಆಗಲೇ ಅವನಲ್ಲಿ ನವ್ಯಶಕ್ತಿ ತುಂಬಿದಂತೆ ಭಾಸವಾಯಿತು. ಆತ ದೇವರ ಹೆಸರೆತ್ತಿ ಆ ಚಕ್ರ ಎತ್ತಿಬಿಟ್ಟ. ಈಗ ಚಕ್ರ ಅವನಿಗೆ ಸೇರಿತು.



ಮರುದಿನ ಭಗವಾನ್ ಜಗನ್ನಾಥ ಮತ್ತೊಮ್ಮೆ ಅವನ ಕನಸಿನಲ್ಲಿ ಕಾಣಿಸಿಕೊಂಡು-"ನಿನ್ನ ಆ ಚಕ್ರವನ್ನು ಹನುಮಂತ ಎತ್ತಿದ್ದ. ಹೀಗಾಗಿ ಅವನಿಗೊಂದು ದೇವಾಲಯ ಕಟ್ಟಿಸು"-ಎಂದ. ಆ ಮನುಷ್ಯ ಜಗನ್ನಾಥ ಮಂದಿರದಲ್ಲೇ ಹನುಮಂತನ ವಿಶಾಲ ಪ್ರತಿಮೆಯೊಂದನ್ನು ಪ್ರತಿಷ್ಠಾಪಿಸಿದ. ಇಂದೂ ನಾವದನ್ನು ಅಲ್ಲಿ ಕಾಣಬಹುದು. ಪುರಿಯಲ್ಲಿ ಸುತ್ತಲೂ ಸಮುದ್ರದ ಗರ್ಜನೆ ಕೇಳಿಸುತ್ತದೆ. ಆದರೆ ದೇವಾಲಯದಲ್ಲಿ ಹನುಮಂತನೆದುರು ಹಿಂದಿಷ್ಟೂ ಶಬ್ದ ಕೇಳಿಸುವುದಿಲ್ಲವಂತೆ. ಆ ಶಬ್ದ ಹನುಮಂತನ ವಿಶಾಲ ಕಿವಿಯೊಳಗೆ ಸೇರಿ ಹೋಗುತ್ತದೆಂದು ಜನರ ನಂಬುಗೆ.

(ಹಿಂದಿಯಿಂದ)

—ಶ್ರೀ ಬಿ. ಸುಬ್ರಾಯ ಅಡಿಗ

ಆಸೆಯ ತೊರೆಯದೆ
ಕೋಪವ ತೊರೆಯದೆ
ನಿನ್ನಯ ನಾಮವ ತೊರೆದವರಾವು
ಧರ್ಮವು ತಿಳಿದರು
ಪಾಪವ ಮಾಡುತ
ನಿನ್ನಯ ನೆನಪನು ತೊರೆದವರಾವು
ತಿರುಮಲೆ ಒಡೆಯನೆ
ಕರುಣದಿ ನೋಡುತ
ನಮ್ಮನು ಕಾಯ್ದು ಉದ್ಧರಿಸೊ

-ಎಸ್.

(6 ನೇ ಪುಟದಿಂದ)

2. ಮನುಷ್ಯನು ಉಪಾಸಿಸಬೇಕಾದ ದೈವ ಪರಬ್ರಹ್ಮದಿಂದ ಬೇರೆಯಾದ ಅಥವಾ ಕಡಮೆಯಾದ ಒಂದು ವಸ್ತು ಅಲ್ಲ. ಅದು ಪರಬ್ರಹ್ಮವೇ ಎಂದು ಸಾರಿದ್ದು;

3. ಪೂರ್ವದಿಂದ ಬಂದ ದೇವಾಲಯಗಳಲ್ಲಿ ಈ ಪರವಸ್ತುವಿನ ಪೂಜೆಗೆ ಒಂದು ನಿಷ್ಕೃಷ್ಟ ಆಕಾರವನ್ನು ಕೊಟ್ಟಿದ್ದು;

4. ಹಳೆಯ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿ ಹೊಸ ದೇವಾಲಯಗಳ ನಿರ್ಮಾಣಕ್ಕೆ ಕಾರಣರಾದದ್ದು;

5. ಲೋಕವನ್ನು ಉದ್ಧರಿಸಬಲ್ಲ ತಮ್ಮ ಮತ ಸರಿ ಎಂದು ಅನೇಕ ಸಭೆಗಳಲ್ಲಿ ಅನೇಕ ಪರಮತೀಯ ಪಂಡಿತರೊಂದಿಗೆ ವಾದ ಮಾಡಿ ತಮ್ಮ ಮತ ಸರಿ ಎಂದು ಸಮರ್ಥಿಸಿದ್ದು;

6. ತಮ್ಮ ಮತವನ್ನು ಒಪ್ಪಿದ ಪ್ರಭುಗಳಿಗೆ ವೈಷ್ಣವ ದೀಕ್ಷೆಯನ್ನು ಕೊಟ್ಟು ಸದ್ಧರ್ಮದ ಪ್ರಚಾರಕ್ಕೆ ಅವರ ಬೆಂಬಲವನ್ನು ಗಳಿಸಿದ್ದು;

7. ಸಮಾಜ ಜೀವನದಲ್ಲಿ ಜಾತಿ ಎಂಬ ಮಾತನ್ನು ಆತಿಗೆ ಒಯ್ಯ ಬಾರದು ಎಂಬ ತಿಳಿವಳಿಕೆಯನ್ನು ಹರಡಿದ್ದು;

8. ಆರ್ಯರಲ್ಲವೆಂಬ ಕಾರಣದಿಂದ ಆ ಮುನ್ನ ದೇವಾಲಯಗಳಿಗೆ ಪ್ರವೇಶಿಸುವ ಅಧಿಕಾರ ಇಲ್ಲದಿದ್ದ ಜನರಿಗೆ ಅವರು ಭಕ್ತರು ಆಹುದಾದರೆ ವರ್ಷದಲ್ಲಿ ಕೆಲವುದಿನ ಆ ಅಧಿಕಾರ ಇರಲಿ ಎಂದು ಏರ್ಪಾಡು ಮಾಡಿದ್ದು;

9. ತಮ್ಮ ನಂತರ ತಮ್ಮ ಮತದ ಅನುಯಾಯಿಗಳನ್ನು ಸಿದ್ಧಾಂತದ ಮಾರ್ಗದಲ್ಲಿ ನಡೆಸುವುದಕ್ಕೆ ಗುರುಪೀಠಗಳನ್ನು ಸ್ಥಾಪಿಸಿದ್ದು.

ಇಂಥ ಮಹತ್ಕಾರ್ಯವನ್ನು ಸಾಧಿಸಿ ಸಂದೇಹವೇ ಇಲ್ಲದೆ ಮಹನೀಯ ಚೇತನವೆಂದು ಕಂಡ ಈ ಗುರುವನ್ನು ಇವರ ಅನುಯಾಯಿಗಳು ಆದಿಶೇಷನ ಅವತಾರವೆಂದೇ ಪೂಜಿಸಿದರು. ಹೀಗಿದ್ದೂ ಆಚಾರ್ಯರು ಮಾತ್ರ ತಾನೊಬ್ಬ ಸಾಮಾನ್ಯ ಮಾನವ ಎಂಬಂತೆ ಸರಳವಾಗಿ ನಡೆದು ಕೊಂಡರು.

ಭರತ ವರ್ಷದ ನಮ್ಮ ಪೂರ್ವಿಕರು ತಮಗೆ ಗೋಚರವಾದ ಧರ್ಮವನ್ನು ಸನಾತನ ಧರ್ಮ ಎಂದು ಕರೆದರು. ಇದರ ವಿಶಿಷ್ಟ ಲಕ್ಷಣ, ಅನಂತವಿಧ ಮನೋಧರ್ಮ, ಅನಂತವಿಧಬುದ್ಧಿ,ಧರ್ಮದ ಅನಂತಾನಂತಚೇತನರ ಅಧ್ಯಾತ್ಮ ಅನುಭವವನ್ನು ಒಪ್ಪಿಕೊಳ್ಳುವುದು. ಅಲ್ಲಗಳೆಯದೆ ಆದರದಿಂದ ಕಾಣುವುದು 'ಅನಂತಾ ವೈ ವೇದಾಃ' ಎನ್ನುವುದು ನಮ್ಮ ಹಿರಿಯರದೊಂದು ವಾಕ್ಯ. ಬುದ್ಧಿ, ಮನೋಧರ್ಮ ಬೇರೆ ಎಂದ ಮೇಲೆ ಅನುಭವ ಬೇರೆ ಅದರ ಉಕ್ತಿ ಬೇರೆ ಆಗುವುದು ಅನಿವಾರ್ಯ. ಇದನ್ನು ಗುರುತಿಸಿ ನಮ್ಮ ಹಿರಿಯರು 'ಏಕಂ ಸದ್ವಿಪ್ರಾಃ ಬಹುಧಾ ವದಂತಿ' ಎಂದರು.. ಇರುವುದು ಒಂದು, ಜಾಣರು ಅದನ್ನು ಬಹುರೀತಿಯಾಗಿ ಬಣ್ಣಿಸುತ್ತಾರೆ.

ಆದರೆ ನಮ್ಮ ಜನ ಈ ಸತ್ಯವನ್ನು ಸ್ವಲ್ಪ ಕಾ
ನಂತರ ಮರೆತೆವು. ಉಪನಿಷತ್ತುಗಳು ಎಲ್ಲ
ಒಂದೇ ಮತವನ್ನು ಸಾರುತ್ತವೆ ಸಾಧಿಸಿ
ಅದ್ವೈತವನ್ನೇ ಸಾರುತ್ತವೆ ಎ
ಒಂದು ಸಮುದಾಯ, ದ್ವೈತವನ್ನೇ ಸ
ತ್ತವೆ ಎಂದು ಮತ್ತೊಂದು ಸಮುದಾ
ವಿಶಿಷ್ಟವಾದ ಅದ್ವೈತವನ್ನೆ ಸಾರು
ಎಂದು ಮತ್ತೊಂದು ಸಮುದಾ
ಸಿದ್ಧಾಂತಮಾಡಲು ತೊಡಗಿದವು. ಭಾ
ದಲ್ಲಿ ಹೇಳಿರುವಂತೆ ಎಲ್ಲ ದರ್ಶನ
ಗುರಿಯೂ ಸರಿಯಾದ ಜೀವನ. ಸರಿಯ
ಜೀವನವನ್ನು ಸಾಧಿಸಿಕೊಡುವ ದರ್ಶನ
ಸರಿಯೇ. ವೇದಾಂತದ ಮೂರು ಮತ
ಸರಿಯಾದ ಜೀವನವನ್ನು ಸಾಧಿಸಿಕೆ
ಬಲ್ಲವು. ಇದು ಈ ಮೂರು ಮತಗಳ ಶ್ರೇ
ವ್ಯಕ್ತಿಗಳ ಜೀವನದಿಂದ ಸ್ಪಷ್ಟವಾಗಿ ಕಾ
ತ್ತದೆ. ಆದ್ದರಿಂದ ಈ ಮೂರು ಸರಿಯ
ಮತಗಳೇ. ಒಬ್ಬೊಬ್ಬನು ತನ್ನ ಹು
ನಿಂದ, ಎಂದರೆ ತಾನು ಯಾವ ಸಮುದಾ
ದಲ್ಲಿ ಹುಟ್ಟಿದಾನೆ ಎಂಬುದರಿಂದ ಅ
ತನ್ನ ಹುಟ್ಟುಗುಣದಿಂದ ತನಗೆ ಯ
ಮತ ಅನುಕೂಲ ಎಂದು ನೋಡಿಕೊ
ಬೇಕು. ಅದನ್ನು ಭದ್ರವಾಗಿ ಹಿಡಿದು
ರಿಂದ ಉದ್ಧಾರವಾಗ ಬೇಕು. ಈ ಮ
ಳಲ್ಲಿ ಒಂದರ ವಿವರವನ್ನು ತರ್ಕಬದ್ಧವ
ರೂಪಿಸಿ ಸಿದ್ಧಾಂತ ಮಾಡಿ ರಾಮಾನು
ಜಾರ್ಯರು ಮಾನವ ವರ್ಗಕ್ಕೆ ಉಪಕ
ಮಾಡಿದರು. ಲೋಕ ಜೀವನದಲ್ಲಿ ಧರ್ಮ
ಇನ್ನೂ ಸರಿಯಾದ ಸ್ಥಾನ ದೊರೆತಿಲ್ಲ. ಅ
ದೊರೆತ ಕಾಲಕ್ಕೆ ಸನಾತನ ಧರ್ಮದ ಅ
ತಾರ ಪುರುಷರು, ಆಚಾರ್ಯ ಪುರುಷ
ಲೋಕ ಸಂಗ್ರಹಕ್ಕಾಗಿ ಎಂಥ ಮಹಾಕಾ
ಮಾಡಿದಾರೆ ಎನ್ನುವುದು ಜನರಿಗೆ ಮನವ
ಟ್ಟತ್ತದೆ. ಅಗ್ಗ ಸರ್ವ ಮಾನವ ಲೋ
ದಿಂದ ಪೂಜೆ ಪಡೆಯುವ ಮಹನೀಂ
ಮೂರ್ತಿಗಳಲ್ಲಿ ಶ್ರೀರಾಮಾನುಜಾಚಾರ್ಯ
ರದು ಒಂದಾಗಿರುತ್ತದೆ.

ಸರ್ವದೇಶ ದಶಾ
ಕಾಲೇಷ್ವವ್ಯಾಹತಪರಾಕ್ರಮಾ
ರಾಮಾನುಜಾರ್ಯ
ದಿವ್ಯಾಜ್ಞಾ ವರ್ಧತಾಮಭಿವರ್ಧತಾಂ

[ಕೃಪೆ: ವಿಚಾರ–ಮಾಸ್ತಿ ವೆಂಕಟೇಶ ಅಯ್ಯಂ
ಗಾರ್, ಪುರೋಗಾಮಿ ಸಾಹಿತ್ಯ ಸಂ
ಮಲ್ಲೇಶ್ವರ 10ನೇ ಕ್ರಾಸ್,
ಬೆಂಗಳೂರು–3.

# ಓರಿಯೆಂಟಲ್ ಕಾಲೇಜಿನ ಶತ ಜಯಂತ್ಯುತ್ಸವ

ತಿರುಪತಿಯಲ್ಲಿ 1884 ರಲ್ಲಿ ಸ್ಥಾಪಿತವಾದ ಓರಿಯಂಟಲ್ ಕಲಾಶಾಲೆ ತನ್ನ ಶತಜಯಂತ್ಯುತ್ಸವನ್ನು ಇದೇ ಏಪ್ರಿಲ್ 1 ರಿಂದ 5 ರವರೆಗೆ ಐದು ದಿನಗಳ ಕಾಲ ಸಂಭ್ರಮದಿಂದ ಆಚರಿಸಿತು.

1-4-87 ರಂದು ಸಂಜೆ ತಿರುಪತಿಯ ಡಿ. ಎಸ್. ಪಿ. ಶ್ರೀ ಎಂ. ವಿ. ರಾಮಚಂದ್ರ ರಾಜು ಅವರ ಅಧ್ಯಕ್ಷತೆಯಲ್ಲಿ ಉದ್ಘಾಟಿಸಲ್ಪಟ್ಟ ಉತ್ಸವಗಳಲ್ಲಿ ಆಚಾರ್ಯ ಶ್ರೀ ಜಿ. ನಾಗೇಶ್ವರ ರಾವು, ಡಾ॥ ಎನ್. ಗಂಗಯ್ಯ, ಆಚಾರ್ಯ ಶ್ರೀ ವಿ. ಆಂಜನೇಯಶರ್ಮ, ಶ್ರೀ ಎಂ. ವಿ. ರಾಮನಾಥ ಘನಪಾಠಿ, ಡಾ॥ ಎಂ. ಎಸ್. ರಾಮಾನುಜ ತಾತಾಚಾರ್ಯ, ಶ್ರೀ ಡಿ. ನಾಗಸಿದ್ಧಾ ರೆಡ್ಡಿ, ಶ್ರೀ ಸಿ. ಗೋಪಾಲನ್ ಅವರುಗಳು ಉಪನ್ಯಾಸಗಳನ್ನು ನಡೆಸಿದರು.

ಎರಡನೆಯದಿನ ಶ್ರೀ ಗೌರಿಪೆದ್ದಿ ರಾಮಸುಬ್ಬ ಶರ್ಮರ ಅಧ್ಯಕತೆಯಲ್ಲಿ ಶ್ರೀಗುಂಡ್ಲೂರಿ ದತ್ತಾತ್ರೇಯ ಶರ್ಮರ ಅಷ್ಟಾವಧಾನ ಕಾರ್ಯಕ್ರಮ ನಡೆಯಿತು. ನಾಲ್ಕನೆಯ ದಿನ 'ಭುವನವಿಜಯ'. ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಆರಂಭಿಸಿದ ಸಭೆಯಲ್ಲಿ ತೆಲುಗಂಗಾ ಪ್ರಾಜೆಕ್ಟ್‌ನ ಶ್ರೀ ಕೆ. ವೆಂಕಟಶಿವಯ್ಯನವರು ಶ್ರೀ ಕೃಷ್ಣದೇವರಾಯರಾಗಿ, ಖ್ಯಾತ ವಿದ್ವಾಂಸ ಕವಿಗಳು ಸರ್ವಶ್ರೀ ಡಾ॥ ಪ್ರಸಾದರಾಯ ಕುಲಪತಿ, ಕರುಣಶ್ರೀ ಮುವ್ವ ವೃಷಾದ್ರಿಪತಿ, ಡಾ॥ ಜಂದ್ಯಾಲ ಬಿ. ರಂಗಾಚಾರ್ಯ, ರಾಜಣ್ಣ ಕವಿ, ಡಾ॥ ಬಿ. ರಾಮಬ್ರಹ್ಮಂ,ಡಾ॥ ಮೇಡಸಾನಿಮೋಹನ್, ಎಂ. ಹರನಾಥ ಶರ್ಮರು, ನವರತ್ನಕವಿಗಳಾಗಿ ವ್ಯವಹರಿಸಿದರು. ಐದು ದಿನಗಳೂ ನಾಟಕ ಕಾರ್ಯಕ್ರಮಗಳು ಏರ್ಪಾಡಾಗಿದ್ದವು. ದಾಶಾರ್ಹಸ್ಯ ದಯಾಲುತಾ, ಶ್ರೀನಿವಾಸಾವಿರ್ಭಾವ (ಸಂಸ್ಕೃತ-ದರ್ಶಕರು: ಶ್ರೀರಂಗಭಟ್ಟರ್,) ಜೀಜೀ. ಸೇಠ್‌ಜಿ (ಹಿಂದಿ ದರ್ಶಕರು ಡಾ॥ ಎಂ. ನಾಗರತ್ನಮ್ಮ) ಪ್ರೇಮಿಸ್ತೇ ಏಮೌತುಂದಿ (ತೆಲುಗು-ದರ್ಶಕರು-ಶ್ರೀ ರಂಗಭಟ್ಟರ್) ನಾಟಕಗಳು ಜನವನ್ನು ಆಕರ್ಷಿಸಿದವು.

ಓರಿಯಂಟಲ್ ಕಾಲೇಜಿನ ಪ್ರಾಂಶುಪಾಲ ಶ್ರೀ. ನಾಗಸಿದ್ಧಾ ರೆಡ್ಡಿ ಅವರ ಅಧ್ಯಕ್ಷತೆಯಲ್ಲಿ 5ನೇ ತಾರೀಖು ಆಂಧ್ರ ಪ್ರದೇಶದ ಮಾಜಿ ಶಿಕ್ಷಣ ಸಚಿವ ಶ್ರೀ ಮುದ್ದು ಕೃಷ್ಣಮನಾಯುಡು ಅವರು ವಿಶೇಷ ಅತಿಥಿಗಳಾಗಿ ವಿದ್ಯೆಯ ಸೂಕ್ತ ಪ್ರಸಾರದ ಅಗತ್ಯ, ದೇಶದ ಅಭಿವೃದ್ಧಿಯಲ್ಲಿ ವಿದ್ಯಾರ್ಥಿಗಳ ಉಪಾಧ್ಯಾಯರ ಪಾತ್ರವನ್ನು ವಿವರಿಸಿದರು.

## ವಾರ್ತಾಲಹರಿ

ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯ ಪ್ರಾಂಶುಪಾಲ ಕಾರ್ಯದರ್ಶಿ ಶ್ರೀ ಸಿ. ಗೋಪಾಲನ್ ಅವರು ಹಿಂದಿಯಲ್ಲಿ ಮಾತನಾಡಿದರು. ತಿ.ತಿ.ದೇ. ವೈದ್ಯಾಧಿಕಾರಿ ಡಾ॥ ಕೆ. ಉಷಾದೇವಿ ಅವರು ಶತಮಾನೋತ್ಸವ ಸ್ಪರ್ಧೆಗಳ ವಿಜಯಿಗಳಿಗೆ ಬಹುಮಾನ ವಿತರಣೆ ಮಾಡಿದರು.

1869 ರಲ್ಲಿ ತಿರುಮಲೆಯ ಶ್ರೀವೆಂಕಟೇಶ್ವರ ಸ್ವಾಮಿ ದೇವಾಲಯದ ಆಚಾರ್ಯರು ಶ್ರೀ ರಂಗಾಚಾರ್ಯರು ತಿರುಪತಿಯನ್ನು ವಿದ್ಯಾಪ್ರಸಾರ ಕೇಂದ್ರವನ್ನಾಗಿ ಮಾಡಬೇಕೆಂಬ ಉದ್ದೇಶದಿಂದ ಒಂದು ವೇದ ಪಾಠಶಾಲೆಯನ್ನು ಆರಂಭಿಸಿದರು. 1883 ರಲ್ಲಿ ಆಗಣ ಮದ್ರಾಸ್‌ನ ಆಂಗ್ಲ ರಾಜ್ಯಪಾಲ ಗ್ರಾಂಡ್ ಡಫ್ ಅವರ ಆದೇಶಾನುಸಾರ ಈ ಶಾಲೆಯನ್ನು ವಿಲೀನಗೊಳಿಸಿಕೊಂಡು ಮಹಂತ ಪ್ರಯಾಗದಾಸಜೀ ಅವರು 1884ರ ಫೆಬ್ರುವರಿಯಲ್ಲಿ ಸಂಸ್ಕೃತ ಪಾಠಶಾಲೆಯನ್ನು ಶ್ರೀ ಗೋವಿಂದ ರಾಜಸ್ವಾಮಿ ಆಲಯ ಕಲ್ಯಾಣ ಮಂಟಪದಲ್ಲಿ ಆರಂಭಿಸಿದರು. ವೇದಗಳು, ದಿವ್ಯ ಪ್ರಬಂಧಗಳು, ನ್ಯಾಯ ವ್ಯಾಕರಣ ಶಾಸ್ತ್ರಗಳ ಬೋಧನೆಯಿಂದ ಆರಂಭವಾಗಿ, ಆಗಮಶಾಸ್ತ್ರಗಳು, ಆಯುರ್ವೇದ, ಮೊದಲಾದ ಶಾಸ್ತ್ರಗಳಲ್ಲಿ ಹರಡಿ, ತೆಲುಗು, ಹಿಂದಿ ತಮಿಳು ವಿದ್ವಾನ್ ಶಿಕ್ಷಣವನ್ನೂ, ಶಿರೋಮಣಿ ಪದವಿ ಶಿಕ್ಷಣವನ್ನೂ ನೀಡುವುದರಲ್ಲಿ ಮುಂದುವರಿದು, ಈಗ ಸುಮಾರು 270 ಮಂದಿ ವಿದ್ಯಾರ್ಥಿಗಳು 40 ಅಧ್ಯಾಪಕರೂ ಇರುವ ಈ ಶಾಲೆಯಲ್ಲಿ ಸಾಹಿತ್ಯ, ವ್ಯಾಕರಣ, ನ್ಯಾಯ ಶಿರೋಮಣಿ, ತೆಲುಗು ಹಿಂದಿ ವಿದ್ವಾನ್, ಇವುಗಳ ಎಂಟ್ರೆನ್ಸ್ ಕೋರ್ಸ್‌ಗಳು, ಪ್ರಿಡಿಗ್ರಿ ಕೋರ್ಸ್‌ಗಳು, ಬಿ. ಎ. ಕೋರ್ಸ್‌ಗಳು ಇವೆ. 1939ರಲ್ಲಿ ಆರಂಭವಾದ ಪ್ರಾಚ್ಯ ಕಲಾ ಪರಿಶೋಧನ ಸಂಸ್ಥೆ ಅದರ ಅನುಬಂಧವಾದ ಗ್ರಂಥಾಲಯ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯ ಆರಂಭವಾದಾಗ ಅದರಲ್ಲಿ ವಿಲೀನವಾದವು.

## ಮೆಟ್ಟಿಲು ಉತ್ಸವ

ತಮಿಳುನಾಡು ಕರ್ನಾಟಕಗಳಿಗೆ ಸಂಬಂಧಿಸಿದ ಸುಮಾರು 108 ಭಜನಸಂಘಗಳು ತಿರುಮಲೆಯ ಮೆಟ್ಲ ಉತ್ಸವದಲ್ಲಿ ಪಾಲ್ಗೊಂಡು ಯಶಸ್ವಿಗೊಳಿಸಿದವು. ತಿರುಪತಿಯ ಅಲಿಪಿರಿಯಲ್ಲಿ ಮೊದಲ ಮೆಟ್ಟಿಲಿಗೆ ಪೂಜೆ ಮಾಡಿ ಮಂಗಳವಾರ 14 ನೇ ಏಪ್ರಿಲ್ ನ ಬೆಳಗ್ಗೆ 7 ಗಂಟೆಗೆ ಉತ್ಸವವನ್ನು ಆರಂಭಿಸಲಾಯಿತು. ಅಲ್ಲಿಂದ ಸಮೂಹ ಭಜನೆಯಲ್ಲಿ ಜನಸ್ತೋಮ ಮೆಟ್ಟಿಲುಗಳನ್ನೇರಿ ತಿರುಮಲೆಯನ್ನು ಸೇರಿತು. ತಿ. ತಿ. ದೇ.



ಮೇಲಣ ಚಿತ್ರ: ಸಮಾರೋಪದಲ್ಲಿ ಮಾತನಾಡುತ್ತ ಶ್ರೀ ಮುದ್ದುಕೃಷ್ಣಮನಾಯುಡು ಅವರು.
ಕೆಳಗಡೆಯ ಚಿತ್ರ: ತಿ.ತಿ.ದೇ. ಗಳ ಶಿಕ್ಷಣಾಧಿಕಾರಿ ಡಾ॥ ಎನ್. ಗಂಗಯ್ಯ ಅವರು ಉಪನ್ಯಾಸ ಮಾಡುತ್ತಿರುವಿಕೆ.



ಎಡದಿಂದ ಶ್ರೀ ವೈ. ಚಕ್ರಧರರಾವ್, ಶ್ರೀ ಎಸ್. ಲಕ್ಷ್ಮೀನಾರಾಯಣ, ಶ್ರೀ ಡಿ. ಸೀತಾರಾಮಯ್ಯ, ಶ್ರೀ ಜಯಚಂದ್ರ, ಮಾತನಾಡುತ್ತ ಶ್ರೀ ಮೇಡಸಾನಿ ಮೋಹನ್.

ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಚಕ್ರಧರ ರಾವ್ ಅವರು ಯಾತ್ರಿಕರ ಸೌಕರ್ಯದ ದೃಷ್ಟಿಯಿಂದ ಮೆಟ್ಟಿಲುಗಳಿಗೆ ಸಿಮೆಂಟ್ ಹಾಕುವ ಕೆಲಸವನ್ನು ಕೈಗೆತ್ತಿಕೊಂಡಿರುವುದಾಗಿ ತಿಳಿಸಿದರು.

## ಅನ್ನಮಾಚಾರ್ಯ ವರ್ಧಂತಿ ಉತ್ಸವಗಳು

26-3-87 ರಿಂದ 1-4-87 ರವರೆಗೆ ಒಂದು ವಾರ ಕಾಲ ತಿರುಪತಿಯಲ್ಲಿ ತಿ. ತಿ. ದೇ. ಅನ್ನಮಾಚಾರ್ಯ ಪ್ರಾಜೆಕ್ಟ್ ಆಶ್ರಯದಲ್ಲಿ ತಾಳ್ಲಪಾಕ ಅನ್ನಮಾಚಾರ್ಯರ 484ನೇ ವರ್ಧಂತಿ ಉತ್ಸವವನ್ನು ವೈಭವದಿಂದ ನಡೆಸಲಾಯಿತು.

ಮಾರ್ಚ್ 26 ರಂದು ಬೆಳಗ್ಗೆ ಅನ್ನಮಾಚಾರ್ಯ ಪ್ರತಿಮೆಯೊಂದಿಗೆ ಊರಮೆರವಣಿಗೆ ಸಮೂಹಗಾನದೊಂದಿಗೆ ನಡೆಯಿತು. ಶ್ರೀ ಕೋದಂಡರಾಮಸ್ವಾಮಿ ಉತ್ಸವ ವಿಗ್ರಹಗಳನ್ನು ಮೆರವಣಿಗೆಯಲ್ಲಿ ಅನ್ನಮಾಚಾರ್ಯ ಕಲಾಮಂದಿರಕ್ಕೆ ತಂದು ಅನ್ನಮಾಚಾರ್ಯರ ಕೋದಂಡರಾಮಸ್ವಾಮಿ ಕೀರ್ತನೆಗಳನ್ನು ಹಾಡಲಾಯಿತು.

ಅಂದು ಸಂಜೆ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಮುಖ್ಯ ಅತಿಥಿಯಾಗಿ ಮಾತನಾಡುತ್ತ ತಿ. ತಿ. ದೇ. ಅಧ್ಯಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯನವರು ಅನ್ನಮಾಚಾರ್ಯರ ಕೃತಿಗಳನ್ನು ತಕ್ಕ ಸಂಗೀತದೊಂದಿಗೆ ಕ್ಯಾಸೆಟ್ ಮಾಡುವ ವಿದ್ವಾಂಸರಿಗೆ ತಿ. ತಿ. ದೇ. ನೆರವು ನೀಡುವ ಯೋಜನೆಯನ್ನು ವಿವರಿಸಿದರು. ಅವರ ಮಾತನ್ನು ಸಮರ್ಥಿಸುತ್ತ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಮದುವೆ, ಮೊದಲಾದ ಶುಭ ಸಂದರ್ಭಗಳಲ್ಲಿ ಎಲ್ಲ ಕಡೆಯೂ ಅನ್ನಮಾಚಾರ್ಯರ ಹಾಡುಗಳು ಕೇಳಿಬರುವಷ್ಟು ಪ್ರಚಾರವುಂಟಾಗಲಿ ಎಂದು ಹಾರೈಸಿದರು. ತಿ. ತಿ. ದೇ. ಭದ್ರತಾ ಅಧಿಕಾರಿ ಶ್ರೀ ಜಯಚಂದ್ರ ಅವರು ಸ್ವಾಗತಿಸಿದ ಸಭೆಯಲ್ಲಿ ಅನ್ನಮಾಚಾರ್ಯ ಪ್ರಾಜೆಕ್ಟ್ ಅಧಿಕಾರಿ ಶ್ರೀ ಮೇಡಸಾನಿ ಮೋಹನ್ ಅವರು ವರದಿಯನ್ನು ಓದಿದರು. ತಿ. ತಿ. ದೇ. ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯ ಅವರು ತಾಳ್ಲಪಾಕ ವಂಶದವರನ್ನು ಸತ್ಕರಿಸಿದರು. ನಂತರ ಶ್ರೀ ಜಿ. ಬಾಲಕೃಷ್ಣ ಪ್ರಸಾದ್ ಹಾಗೂ ಶ್ರೀ ನೆದುನೂರಿ ಕೃಷ್ಣಮೂರ್ತಿ ಅವರ ಸಂಗೀತ ಸಭೆಗಳು ನಡೆದವು.

ನಂತರದ ದಿನಗಳಲ್ಲಿ ನಡೆದ ಕಾರ್ಯಕ್ರಮಗಳಲ್ಲಿ ಆಚಾರ್ಯ ಶ್ರೀ ಜಾಸ್ತಿ ಸೂರ್ಯನಾರಾಯಣ, ಶ್ರೀ ಯಲ್ಲಂರಾಜು ಶ್ರೀನಿವಾಸರಾವು, ಡಾ॥ ಕೇಸರ್ಲ ವಾಣಿ, ಡಾ॥ ಕೆ. ಸರ್ವೋತ್ತಮರಾವು, ಶ್ರೀ ಸಮುದ್ರಾಲ ಲಕ್ಷ್ಮಣಯ್ಯ, ಅವರುಗಳ ಉಪನ್ಯಾಸಗಳೂ, ಶ್ರೀ ಎಸ್. ಆರ್. ಜಾನಕೀರಾಮನ್, ಶ್ರೀಮತಿ ಮುನಿರತ್ನಮ್ಮ, ಶ್ರೀ ಎಸ್. ನರಸಿಂಹುಲು, ಶ್ರೀ ಡಿ. ಪಶುಪತಿ, ಶ್ರೀಮತಿ ವೇದವತೀ ಪ್ರಭಾಕರ ರಾವು, ಶ್ರೀ ಎಂ. ಎಸ್. ಬಾಲಸುಬ್ರಹ್ಮಣ್ಯಶರ್ಮ, ಶ್ರೀ ಪಿ. ಎಸ್. ರಂಗನಾಥ್, ಶ್ರೀ ನಾಗೇಶ್ವರ ರಾವು ನಾಯುಡು, ಶ್ರೀ ಅನಂದಭಟ್ಟರ್ ಮೊದಲಾದವರ ಸಂಗೀತ ಸಭೆಗಳು ನಡೆದವು.

ಕಡೆಯದಿನದ ಸಮಾರೋಪ ಸಭೆಯಲ್ಲಿ ಅನ್ನಮಾಚಾರ್ಯ ಸಂಗೀತ ಸ್ಪರ್ಧೆಗಳಲ್ಲಿ ಗೆದ್ದ ಬಾಲಕ ಬಾಲಿಕೆಯರಿಗೆ ಬಹುಮಾನಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ವಿತರಿಸಿದರು. ನಂತರ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಶ್ರೀ ವೈ. ಚಕ್ರಧರರಾಯರು ಮಾತನಾಡುತ್ತ ಈ ಉತ್ಸವಗಳನ್ನು ಬೆಟ್ಟದ ಮೇಲೆ ನಡೆಸಿ ದೇಶದ ನಾಲ್ಕೂ ಮೂಲೆಗಳಿಂದ ಬರುವ ಯಾತ್ರಿಕರಿಗೆ ಇದರಲ್ಲಿ ಭಾಗವಹಿಸಿ ಆನಂದಿಸಲು ಅವಕಾ ನೀಡಬೇಕೆಂದು ಸೂಚಿಸಿದರು. ಅನ್ನಮಾಚಾ ಪ್ರಾಜೆಕ್ಟ್, ಕಲಾವಿದರಿಂದ ಸಂಗೀತ ಸಭೆಯ ಡಾ॥ ಸೇಲಂ ಜಯಲಕ್ಷ್ಮೀ ವೃಂದದ ಸಂಗಿ ಸಭೆಯೂ ನಡೆಯಿತು. ಅನ್ನಮಾಚಾ ಪ್ರಾಜೆಕ್ಟ್ ಅಧಿಕಾರಿ ಶ್ರೀ ಮೇಡಸಾನಿ ಮೋಹ ಅವರು ವಂದನೆ ಸಲ್ಲಿಸಿದರು.

## ವಿಶೇಷ ಆಸ್ಪತ್ರೆಗೆ ೨ ಕೋಟಿ ರೂ ನೆರವು

ತಿರುಪತಿಯಲ್ಲಿ ಯೋಜಿಸಲಾಗಿರುವ ವಿಶೇ ಆಸ್ಪತ್ರೆಯ ನಿರ್ಮಾಣದಲ್ಲಿ ತಿ. ತಿ. ದೇ. ಗ 2 ಕೋಟಿ ರೂಗಳ ನೆರವು ನೀಡುವುದೆಂ ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ಡಿ. ಸೀ ರಾಮಯ್ಯ ಅವರು ತಿಳಿಸಿದ್ದಾರೆ.

ಎಸ್. ವಿ. ಆರ್. ಆರ್. ಆಸ್ಪತ್ರೆಯ ವಿಶೇ ಕೋಣೆಗಳ ವಿಭಾಗ (ಹೃದ್ರೋಗ ಚಿಕಿತ್ಸೆ) ವ ಉದ್ಘಾಟಿಸುತ್ತ, ಈ ಸುದ್ದಿಯನ್ನು ತಿಳಿಸಿದ ಅವ ಈ ವಿಭಾಗಕ್ಕೆ 8 ಲಕ್ಷ ರೂ.ಗಳ, ಇಮೇ ಇನ್‌ಟೆನ್ಸಿಫೈಯರ್ ಅನ್ನು ದಾನವಾಗಿ ತಿ.ತಿ.ದೆ ನೀಡುವುದೆಂದು ತಿಳಿಸಿದರು.

ಎಸ್. ವಿ. ವೈದ್ಯಕಾಲೇಜಿನ ಪ್ರಾಂಶುಪಾ ಪ್ರೊ॥ ಕೆ. ವಿ. ಎಂ. ಸೋಮಸುಂದರಂ ಅವ ಅಧ್ಯಕ್ಷತೆ ವಹಿಸಿದ್ದರು.

## ತಿರುಪತಿಯಲ್ಲಿ ಮಹಾರಾಷ್ಟ್ರ ರಾಜ್ಯಪಾಲರು

ಮಹಾರಾಷ್ಟ್ರದ ರಾಜ್ಯಪಾಲ ಡ ಶಂಕರದಯಾಳ ಶರ್ಮ ಅವರು ತಿರುಮಲ ಆಗಮಿಸಿ ಸ್ವಾಮಿಯನ್ನು ಆರಾಧಿಸಿದರು. ನಂತ ಶ್ರೀಯುತರು ತಿರುಚಾನೂರು ಪದ್ಮಾವತೀದೇ ಆಲಯವನ್ನು ಸಂದರ್ಶಿಸಿ ಪೂಜೆ ನಡೆಸಿದರು.

ರಾಜ್ಯಪಾಲರನ್ನು ತಿ. ತಿ. ದೇ. ಉಪಕಾರ್ಯ ನಿರ್ವಹಣಾಧಿಕಾರಿ ಶ್ರೀ ಮುನಿಕೃಷ್ಣ ನ ಎ. ಇ. ಓ. ಶ್ರೀ ಆಂಜನೇಯುಲು ನಾಯು ಅವರು ಸ್ವಾಗತಿಸಿದರು. ಆಲಯದ ಪೇಷ್ಕಾ ಶ್ರೀ ಇ. ವೀರಯ್ಯ ಅವರು ದರ್ಶನದ ಏರ್ಪಾ ಗಳನ್ನು ಮಾಡಿದರು.

## ಶ್ರೀ ಮೇಡಸಾನಿ ಮೋಹನ್ ಅವರಿಗೆ ಡಾಕ್ಟರೇಟ್ ಪ್ರಶಸ್ತಿ

ಅನ್ನಮಾಚಾರ್ಯ ಪ್ರಾಜೆಕ್ಟ್ ವಿಶೇಷಾಧಿ ಕಾರಿ ಶ್ರೀ ಮೇಡಸಾನಿ ಮೋಹನ್ ಅವರಿಗೆ ಅ 'ಅನ್ನಮಯ್ಯ ಭಾಷಾವಿಶ್ಲೇಷಣಮು' ಶೋಧನ ಪ್ರಬಂಧಕ್ಕಾಗಿ ಮದ್ರಾಸು ವಿಶ್ವವಿದ ನಿಲಯ ಡಾಕ್ಟರೇಟ್ ಪ್ರಶಸ್ತಿಯನ್ನು ನೀಡಿ ಸುಮಾರು 1500 ಪುಟಗಳ ಪ್ರಬಂಧದ ಈ ಶೋಧನೆ ತಿ. ತಿ. ದೇ. ಗಳ ಆರ್ಥಿಕ ನೆರವಿನಿಂ

ಸಾಧ್ಯವಾಯಿತು. ಹೊರಗಡೆಯ ವಿಶ್ವವಿದ್ಯಾಲಯಗಳಲ್ಲಿನ ಸಂಶೋಧನೆಗಳಿಗಾಗಿ ತಿ. ತಿ. ದೇ. ಸಂಶೋಧನ ವೇತನ ನೀಡುವ ಯೋಜನೆಯಲ್ಲಿ ಮೊದಲು ಪೂರ್ಣಗೊಂಡ ಪರಿಶೋಧನೆಯಿದು.

## ಶ್ರೀ ತ್ಯಾಗರಾಜಸ್ವಾಮಿ ವಿಗ್ರಹ ಪ್ರತಿಷ್ಠೆ, ಆರಾಧನೆ

ತಿರುಪತಿಯ ಶ್ರೀ ತ್ಯಾಗರಾಜಸ್ವಾಮಿ ಆಲಯ ಮತ್ತಿತರ ಭವನಗಳ ಟ್ರಸ್ಟ್ ಏಪ್ರಿಲ್ 18 ರಂದು ಶನಿವಾರ ಸ್ಥಳೀಯ ತ್ಯಾಗರಾಜ ಮಂದಿರದಲ್ಲಿ ಶ್ರೀ ತ್ಯಾಗರಾಜಸ್ವಾಮಿ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿ ಏಳುದಿನಗಳ ಕಾಲ ತ್ಯಾಗರಾಜ ಆರಾಧನೆಯ ಉತ್ಸವವನ್ನು ನಿರ್ವಹಿಸಿತು.

ಏಪ್ರಿಲ್ 15 ರಂದು ತ್ಯಾಗರಾಜರ ವಿಗ್ರಹವನ್ನು ಮೆರವಣಿಗೆಯಲ್ಲಿ ಶ್ರೀ ಕೋದಂಡರಾಮ ಆಲಯದಿಂದ ತ್ಯಾಗರಾಜ ಮಂದಿರಕ್ಕೆ ತಂದು ರಕ್ಷಾ ಬಂಧನ, ಕಲಶಸ್ಥಾಪನ, ಅಖಂಡಗಾನ, ಕುಂಭಾಭಿಷೇಕಗಳ ನಂತರ 18 ರಂದು ಬೆಳಗ್ಗೆ ಪ್ರತಿಷ್ಠಾಪನೆ ಮಾಡಲಾಯಿತು.

ಮದರಾಸು ಸಂಗೀತ ಅಕಾಡಮಿಯ ಅಧ್ಯಕ್ಷ ಶ್ರೀ ಟಿ. ಟಿ. ವಾಸು ಅವರ ಅಧ್ಯಕ್ಷತೆಯಲ್ಲಿ ಮಹಾರಾಷ್ಟ್ರ ಮಂತ್ರಿ ಡಾ॥ ವಿ. ಸುಬ್ರಮಣ್ಯಂ ಅವರು ಆರಂಭಿಸಿದ ಆರಾಧನಾ ಉತ್ಸವದಲ್ಲಿ ಶ್ರೀ ಶೆಮ್ಮಂಗುಡಿ ಶ್ರೀನಿವಾಸ ಅಯ್ಯರ್ ಅವರು ತ್ಯಾಗರಾಜರ ಹಿರಿಮೆಯನ್ನು ಕುರಿತು ಮಾತನಾಡಿದರು. ತಿ. ತಿ. ದೇ. ಗಳ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ವೈ. ಚಕ್ರಧರರಾಯರು ತಿರುಪತಿಯಲ್ಲಿ ನಡೆಯುವ ತ್ಯಾಗರಾಜಸ್ವಾಮಿಗಳ ವಾರ್ಷಿಕ ಆರಾಧನೆಯಲ್ಲಿ ತಿ. ತಿ. ದೇ. ಗಳ ಸಹಕಾರ ಹಸ್ತ ಎಂದೆಂದೂ ಇದ್ದೇ ಇರುತ್ತದೆ ಎಂದು ಭರವಸೆ ನೀಡಿದರು.

ಪ್ರತಿದಿನವೂ ಬೆಳಗ್ಗೆ ತ್ಯಾಗರಾಜರ ಬಗ್ಗೆ ಉಪನ್ಯಾಸಗಳು ಏರ್ಪಾಡಾಗಿದ್ದವು. ಡಾ॥ ಆರ್. ಕೃಷ್ಣಸ್ವಾಮಿ, ಡಾ॥ ವಿ.ಕಾಮೇಶ್ವರರಾವ್, ಶ್ರೀ ಮುಲುಕುಟ್ಲ ಬ್ರಹ್ಮಾನಂದ ಶಾಸ್ತ್ರಿ ಅವರುಗಳು ಉಪನ್ಯಾಸಗಳನ್ನು ನೀಡಿದರು. ಶ್ರೀಮತಿ ಇ. ಗಾಯತ್ರಿ (ವೀಣೆ,) ಶ್ರೀ ಬಿ. ಎನ್. ಸುರೇಶ್ (ಕೊಳಲು) ಶ್ರೀ ಜಿ. ಭಾಸ್ಕರ ರಾಮಾರಾವ್ (ಹರಿಕಥೆ) ಶ್ರೀ ನೆದುನೂರಿ ಕೃಷ್ಣಮೂರ್ತಿ (ಗಾತ್ರ) ಶ್ರೀಮತಿ ಎಂ. ಎಲ್. ವಸಂತಕುಮಾರಿ (ಗಾತ್ರ) ಶ್ರೀಮತಿ ಟಿ. ಮುಕ್ತ, ಶ್ರೀಮತಿ ನಿರ್ಮಲಾ ಸುಂದರರಾಜನ್ ವೃಂದ (ಜಾವಳಿಗಳ ಗಾಯನ) ಕುಮಾರಿ ಸುಜಾತಾ ಶ್ರೀನಿವಾಸನ್ (ಭರತನಾಟ್ಯ) ಸಭೆಗಳೂ ನಡೆದವು. ಸಂಗೀತ ವಿದ್ವಾಂಸ ಶ್ರೀನೆದುನೂರಿ ಕೃಷ್ಣಮೂರ್ತಿ ಅವರಿಗೆ ಶ್ರೀಮತಿ ಅಖಿಲಾ ಶಿವರಾಮನ್ ಅವರಿಂದ "ಸಪ್ತಗಿರಿ ಸಂಗೀತ ವಿದ್ವನ್ಮಣಿ" ಬಿರುದು ಸಂದಿತು.

## ತಿರುಪತಿಯಲ್ಲಿ ಉಚಿತ ನೇತ್ರ ಚಿಕಿತ್ಸಾ ಶಿಬಿರ

ತಿ. ತಿ. ದೇ. ಗಳ ವತಿಯಿಂದ ತಿರುಪತಿಯಲ್ಲಿ 26 ನೇ ಉಚಿತ ನೇತ್ರ ಚಿಕಿತ್ಸಾ ಶಿಬಿರ ನಡೆಸಲಾಗಿದ್ದು, ಹೈದರಾಬಾದಿನ ಶ್ರೀ ಸರೋಜಿನೀದೇವಿ ಕಣ್ಣಿನ ಆಸ್ಪತ್ರೆಯವರು ನೇತ್ರ ಪರೀಕ್ಷೆ ಶಸ್ತ್ರ ಚಿಕಿತ್ಸೆಗಳನ್ನು ನಡೆಸಿ ಕೊಟ್ಟರು.

ತಿ.ತಿ.ದೇ. ಬೋರ್ಡ್‌ನ ಸದಸ್ಯ ಶ್ರೀ ಐ. ಎಲ್. ಎನ್. ಶಾಸ್ತ್ರಿ ಅವರ ಅಧ್ಯಕ್ಷತೆಯಲ್ಲಿ ಏಪ್ರಿಲ್ 4 ರಂದು ನಡೆದ ಪ್ರಾರಂಭೋತ್ಸವದಲ್ಲಿ ಮಾತನಾಡುತ್ತ ತಿ.ತಿ.ದೇ. ಬೋರ್ಡ್ ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯ ನವರು ಈ ಉಚಿತ ಚಿಕಿತ್ಸಾ ಶಿಬಿರಗಳು ತಿರುಪತಿಯಲ್ಲಿ ಮಾತ್ರವೇ ಅಲ್ಲದೆ ಇತರ ಸ್ಥಳಗಳಲ್ಲೂ ನಡೆಯುವಂತಾಗಬೇಕು ಎಂದು ಹಾರೈಸಿದರು.

ಖ್ಯಾತ ನೇತ್ರ ತಜ್ಞ ಡಾ॥ ರಂಗಾರೆಡ್ಡಿ ಅವರ ನೇತೃತ್ವದಲ್ಲಿ ನೇತ್ರಪರೀಕ್ಷೆ ಚಿಕಿತ್ಸೆಗಳು ನಡೆದವು.



ನೇತ್ರ ಚಿಕಿತ್ಸಾ ಶಿಬಿರದ ಪರ್ಯವೇಕ್ಷಣೆಯಲ್ಲಿ ಶ್ರೀ ವೈ. ಚಕ್ರಧರರಾವ್ ಶ್ರೀ ಡಿ. ಸೀತಾರಾಮಯ್ಯ, ಹಾಗೂ ಇತರರು. ಕಣ್ಣಿನ ಪರೀಕ್ಷೆಯಲ್ಲಿ ನಿರತರಾದ ಡಾ॥ ರಂಗಾರೆಡ್ಡಿ.

## ಮುಂದಿನ ಸಂಚಿಕೆಯಲ್ಲಿ .... .... ....

### ಸಪ್ತಗಿರಿ. — ಜೂನ್ 1987

**ಸ್ವಸ್ತಿಕ ಚಿನ್ಹೆ**
– ಆದ್ಯರಾಮಾಚಾರ್ಯ

**ವಿಶ್ವಧರ್ಮ-ಪ್ರಪತ್ತಿ**
– ಡಿ. ಕೃಷ್ಣ ಅಯ್ಯಂಗಾರ್

**ಭೋಗ**
– ಎಚ್. ಆರ್. ಮಣ್ಣೂರ್

**ಆತ್ಮಾಪಹಾರ**
– ವಿ. ಎಸ್. ರಾಮಾನುಜಾಚಾರ್ಯ

**ಮುನಿತ್ರಯ**
– ಎಂ. ಶ್ರೀನಿವಾಸ ಅಯ್ಯಂಗಾರ್

ಧಾರಾವಾಹಿ: ಗೋದಾದೇವೀ ಕೃತ ತಿರುಪ್ಪಾವೈನ ಸಚಿತ್ರ ವಿವರಣೆ.

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ – ಸಂಪಾದಕರು
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

## ತಿಂಗಳಿನ ಮುಖ್ಯ ದಿನಗಳು

### ಜೂನ್ 1987

| | | |
|---|---|---|
| 1. | ಸೋಮವಾರ | ನಮ್ಮಾಳ್ವಾರ್ ಉತ್ಸವಾರಂಭ |
| 2. | ಮಂಗಳವಾರ | ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ ಅಂಕುರಾರ್ಪಣೆ |
| 7. | ಭಾನುವಾರ | ,, ,, ಗರುಡೋತ್ಸವ<br>ತಿರುಚಾನೂರು ಶ್ರೀಪದ್ಮಾವತೀದೇವಿ ತೆಪ್ಪೋತ್ಸವಾರಂಭ |
| 10. | ಬುಧವಾರ | ನಮ್ಮಾಳ್ವಾರ್ ಶಾತ್ತುಮೊರೆ, ಶ್ರೀ ಗೋವಿಂದರಾಜ ಸ್ವಾಮಿ ರಥೋತ್ಸವ |
| 11. | ಗುರುವಾರ | ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ ಚಕ್ರಸ್ನಾನ<br>ತಿರುಚಾನೂರು ಶ್ರೀ ಪದ್ಮಾವತೀದೇವಿ ತೆಪ್ಪೋತ್ಸವ ಸಮಾಪ್ತಿ |
| 27. | ಶನಿವಾರ | ಪೆರಿಯಾಳ್ವಾರ್ ಉತ್ಸವಾರಂಭ. |

## ವಿದ್ಯಾರ್ಥಿಗಳು ವಿದ್ಯಾರ್ಜನೆಗ ಮನಕೊಡಬೇಕು –ಜ್ಞಾನಿ ಜೈಲ್‌ಸಿಂಗ್

ವಿದ್ಯಾರ್ಥಿಗಳು ವಿದ್ಯಾರ್ಜನೆಗೆ ಹೆಚ್ಚು ಮ ಕೊಡಬೇಕು ಎಂದು ಭಾರತದ ರಾಷ್ಟ್ರ ಜ್ಞಾನಿ ಜೇಲ್‌ಸಿಂಗ್ ವಿದ್ಯಾರ್ಥಿ ಸಮೂಹ ಕರೆ ನೀಡಿದರು. ಮಾತೃಭಾಷಾ ಶಿಕ್ಷಣಕ್ಕೆ ಹೆ ಪ್ರಾಧಾನ್ಯ ನೀಡಬೇಕೆಂದೂ, ಸರ್ಕಾ ಅಧ್ಯಾಪಕ ಹಿತಾಸಕ್ತಿಗಳನ್ನು ಕಾಪಾ ಬೇಕೆಂದೂ ಅವರು ಕರೆನೀಡಿದರು.

ರಾಷ್ಟ್ರಪತಿಗಳು ತಿರುಪತಿಯಲ್ಲಿ ತಿ. ತಿ. ದೇ. ಶ್ರೀ ಗೋವಿಂದರಾಜ ಸ್ವಾಮಿ ಕಲಾಶಾಲೆ ಹೊಸಭವನವನ್ನು ಉದ್ಘಾಟಿಸಿ ಮಾತನಾಡು ದ್ದರು. 1 ಕೋಟಿ ರೂಗಳ ಅಂದಾಜು ವೆಚ್ಚ ಈ ಹೊಸ ಕಾಲೇಜು ಭವನದ ಉದ್ಘಾಟನ ಸಮಾರಂಭದ ಅಧ್ಯಕ್ಷತೆಯನ್ನು ಆಂಧ್ರಪ್ರ ಶದ ಮಾಜೀ ಶಿಕ್ಷಣ ಸಚಿವ ಶ್ರೀ ಜಿ. ಮು ಕೃಷ್ಣ ಮನಾಯುಡು ವಹಿಸಿದ್ದರು. ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ದೇವಿನೇನಿ ಸೀ ರಾಮಯ್ಯ ಅವರು ಸ್ವಾಗತಿಸಿದರು.

## ತಿರುಮಲೆಯಲ್ಲಿ ರಾಷ್ಟ್ರಪತಿ

ಏಪ್ರಿಲ್ 6 ರಂದು ಭಾರತದ ರಾಷ್ಟ್ರಪತಿ ಶ್ರೀ ಜೈಲ್‌ಸಿಂಗರು ತಿರುಮಲೆಗೆ ಆಗಮಿಸಿ ವೆಂಕಟೇಶ್ವ ಸ್ವಾಮಿಯನ್ನು ಆರಾಧಿಸಿದರು.

ರಾಷ್ಟ್ರಪತಿಗಳನ್ನು ಮಹಾದ್ವಾರದ ಬ ದೇವಾಲಯ ಮರ್ಯಾದೆಗಳೊಡನೆ ತಿ. ತಿ. ದೆ ಬೋರ್ಡ್ ಅಧ್ಯಕ್ಷ ಶ್ರೀ ದೇವಿನೇನಿ ಸೀತಾ ರಾಮಯ್ಯ ಅವರು ಸ್ವಾಗತಿಸಿದರು. ಶ್ರೀ ವೆಂಕಟೇಶ್ವರಸ್ವಾಮಿಯ ಶೇಷವಸ್ತ್ರವನ್ನು ರಾ ಪತಿಗಳಿಗೆ ಬಹೂಕರಿಸಲಾಯಿತು. ದೇವಾಲಯ ಒಳಗಡೆಯ ರಂಗನಾಥ ಮಂಟಪದಲ್ಲಿ ಅವರನ್ ವೇದೋಕ್ತ ಆಶೀರ್ವದಿಸಲಾಯಿತು

ಸ್ವಾಮಿದರ್ಶನಾನಂತರ ರಾಷ್ಟ್ರಪತಿಗ ತಿ. ತಿ. ದೇ. ಬೋರ್ಡ್‌ನ ಹಲವರು ಸದಸ್ಯ ಹಾಗೂ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ವೈ. ಚಕ್ರಧರರಾವ್ ಅವರೊಂದಿಗೆ ವೈಕುಂಠ ಕ್ಯೂಕಾಂಪ್ಲೆಕ್ಸ್ ಅನ್ನು ಸಂದರ್ಶಿಸಿದರು.

ರಾಷ್ಟ್ರಪತಿಗಳಿಗೆ ಬೆಟ್ಟದ ಮೇಲಣ ಶ್ರೀ ಪದ್ಮಾವತೀ ಅತಿಥಿಗೃಹದಲ್ಲಿ ಬಿಡದಿಯನ್ ಏರ್ಪಡಿಸಲಾಗಿದ್ದಿತು.

(ಚಿತ್ರಗಳು ಒಳ ರಕ್ಷಾಪುಟದಲ್ಲಿ

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

Regd. No. H/TRP/14

ವಾರ್ಷಿಕ ಚಂದಾ ರೂ. 12-00



ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ